**ಮುಖ್ಯ ಇಸವಿಗಳು**

| | |
|---|---|
| ಗಾಂಧೀಜಿಯವರ ಜನನ | 1869 ಅಕ್ಟೋಬರ್ 2 |
| ಅಸಹಕಾರ ಚಳವಳಿ | 1920–1922 |
| ಚೌರಿಚೌರ ದುರಂತ | 1922 |
| ಪೂರ್ಣ ಸ್ವರಾಜ್ಯದ ಘೋಷಣೆ | 1929 |
| ಪೂರ್ಣ ಸ್ವರಾಜ್ಯ ದಿನಾಚರಣೆ | 1930 ಜನವರಿ 26 |
| ಉಪ್ಪಿನ ಸತ್ಯಾಗ್ರಹ | 1930 ಏಪ್ರಿಲ್ |
| ಪೂನಾ ಒಪ್ಪಂದ | 1932 |
| ಎರಡನೇ ವಿಶ್ವಸಮರ | 1939–1945 |
| ಭಾರತ ಬಿಟ್ಟು ತೊಲಗಿ ಚಳವಳಿ | 1942 |
| ಭಾರತಕ್ಕೆ ಸ್ವಾತಂತ್ರ್ಯ | 1947 ಆಗಸ್ಟ್ 15. |

## ಅಭ್ಯಾಸಗಳು



**I ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ಭರ್ತಿ ಮಾಡಿ.**

1. ಗಾಂಧೀಜಿಯವರ ರಾಜಕೀಯ ಗುರು ____________
2. ಗಾಂಧೀಜಿ ಅವರು ಅಹಮದಾಬಾದ್ ಬಳಿ ಸ್ಥಾಪಿಸಿದ ಆಶ್ರಮ____________
3. ಚೌರಿಚೌರ ಘಟನೆಯು ____________ ರಲ್ಲಿ ಸಂಭವಿಸಿತು.
4. "ಸಂಪೂರ್ಣ ಸ್ವರಾಜ್ಯ" ನಿರ್ಣಯವು ____________ ರಲ್ಲಿ ಅಂಗೀಕರಿಸಲ್ಪಟ್ಟಿತು.
5. ಕಾಂಗ್ರೆಸ್ ಸೋಷಲಿಸ್ಟ್ ಪಕ್ಷದ ಮಹಾಕಾರ್ಯದರ್ಶಿ ____________ ಆಗಿದ್ದರು.
6. ಸಂಪೂರ್ಣ ಕ್ರಾಂತಿ ಆಂದೋಲನವನ್ನು ____________ ರವರು ಹುಟ್ಟು ಹಾಕಿದರು.
7. ಸ್ವತಂತ್ರ ಭಾರತದ ಮೊದಲ ಪ್ರಧಾನಮಂತ್ರಿ ____________ ಆಗಿದ್ದರು.

**II ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಗಾಂಧೀಜಿ ಅವರು ಎಲ್ಲಿ, ಯಾವಾಗ ಜನಿಸಿದರು?
2. ಗಾಂಧೀಜಿ ಅವರ ರಾಜಕೀಯ ಗುರು ಯಾರು?
3. ಪೂನಾ ಒಪ್ಪಂದ ಯಾರ್‍ಯಾರ ನಡುವೆ ಏರ್ಪಟ್ಟಿತು?
4. 'ಫಾರ್ವರ್ಡ್ ಬ್ಲಾಕ್' ಆರಂಭಿಸಿದವರು ಯಾರು?
5. ಐ.ಎನ್.ಎ ವಿಸ್ತರಿಸಿ.

6. 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಗಾಂಧೀಜಿ ನೀಡಿದ ಘೋಷಣೆ ಯಾವುದು?
7. 'ನನಗೆ ರಕ್ತ ಕೊಡಿ, ನಿಮಗೆ ಸ್ವಾತಂತ್ರ್ಯ ಕೊಡುತ್ತೇನೆ' ಎಂಬ ಘೋಷಣೆ ನೀಡಿದವರು ಯಾರು?
8. ಅಂಬೇಡ್ಕರ್‌ರವರು ಯಾವಾಗ ಜನಿಸಿದರು?
9. ಭಾರತದ 'ಸಂವಿಧಾನ ಶಿಲ್ಪಿ' ಎಂದು ಯಾರನ್ನು ಕರೆಯುತ್ತಾರೆ?
10. 'ಲೋಕ ನಾಯಕ' ಎಂದು ಯಾರನ್ನು ಕರೆಯುತ್ತಾರೆ?

**III ಈ ಕೆಳಕಂಡ ಪ್ರಶ್ನೆಗಳಿಗೆ ಗುಂಪಿನಲ್ಲಿ ಚರ್ಚಿಸಿ ಉತ್ತರಿಸಿ.**

1. ಗಾಂಧೀಜಿ ಅವರ ಕಾನೂನುಭಂಗ ಚಳವಳಿಯನ್ನು ಕುರಿತು ಬರೆಯಿರಿ.
2. ಭಾರತ ಬಿಟ್ಟು ತೊಲಗಿ ಚಳವಳಿಯನ್ನು ವಿವರಿಸಿ.
3. ಸುಭಾಷ್ ಚಂದ್ರ ಬೋಸರ ಸ್ವಾತಂತ್ರ್ಯ ಹೋರಾಟವನ್ನು ಸಂಕ್ಷಿಪ್ತವಾಗಿ ವಿವರಿಸಿ.
4. ಅಂಬೇಡ್ಕರ್ ಅವರು ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟದ ಕ್ರಮವನ್ನು ತಿಳಿಸಿ.



**ಚಟುವಟಿಕೆ:**

'ದಂಡಿ ಯಾತ್ರೆ' ಮತ್ತು 'ಭಾರತ ಬಿಟ್ಟು ತೊಲಗಿ' ಚಳವಳಿಗಳ ಕುರಿತು ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿರಿ.



ಪಾಠ 06

# ಕರ್ನಾಟಕದ ಸಮಾಜಮುಖಿ ಚಳವಳಿಗಳು




**ಪಾಠದ ಪರಿಚಯ**

ಅಧಿಕಾರರೂಢರು ಜನಪರವಲ್ಲದ ನಿರ್ಧಾರ, ಕಾರ್ಯಕ್ರಮ ಮತ್ತು ಯೋಜನೆಗಳನ್ನು ಕಾರ್ಯಗತ ಮಾಡಲು ಮುಂದಾದಾಗ, ಅವನ್ನು ವಿರೋಧಿಸುವ ಹಕ್ಕು ಜನತೆಯ ಕೈಯಲ್ಲಿದೆ. ಕರ್ನಾಟಕದಲ್ಲಿ ಇಂಥ ಪ್ರಸಂಗಗಳು ಕಾಣಿಸಿಕೊಂಡಾಗ, ಪ್ರಜ್ಞಾವಂತ ನಾಗರಿಕರು ಸಿಡಿದೆದ್ದು ಆಂದೋಲನಗಳನ್ನು ನಡೆಸಿದರು. ಇದೇ ವೇಳೆ ದುರ್ಬಲ, ಶೋಷಿತ ಮತ್ತು ಹಿಂದುಳಿದ ವರ್ಗಗಳು ತಮ್ಮ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಶ್ರೇಯೋಭಿವೃದ್ಧಿಗಾಗಿ ಹೋರಾಟ ಮಾಡಿದರು. ಈ ಪಾಠದಲ್ಲಿ ಕರ್ನಾಟಕದ ಪರಿಸರವಾದಿಗಳು, ಮಹಿಳೆಯರು, ರೈತರು, ದಲಿತರು ಮತ್ತು ಕನ್ನಡಪರ ಸಂಘಟನೆಗಳು ಮಾಡಿರುವ ಚಳವಳಿಗಳನ್ನು ನಿರೂಪಣೆ ಮಾಡಲಾಗಿದೆಯಲ್ಲದೆ ಅಧಿಕಾರ ವಿಕೇಂದ್ರೀಕರಣದ ನಿಟ್ಟಿನಲ್ಲಿ ಜಾರಿಗೊಂಡ ಮಹತ್ವದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಕೂಡ ಪರಿಚಯಿಸಲಾಗಿದೆ.

**ಸಾಮರ್ಥ್ಯಗಳು**

1] ಪರಿಸರ ಚಳವಳಿಯನ್ನು ಕೆಲವು ನಿದರ್ಶನಗಳೊಂದಿಗೆ ಅರಿಯುವರು.
2] ಮಹಿಳೆಯ ಸಬಲೀಕರಣಕ್ಕಾಗಿ ಸರ್ಕಾರ ಕೈಗೊಂಡ ಕ್ರಮಗಳನ್ನು ಮೆಚ್ಚುವರು.
3] ರೈತರು ತಮ್ಮ ಹಿತರಕ್ಷಣೆಗಾಗಿ ನಡೆಸಿದ ಹೋರಾಟಗಳನ್ನು ಅರ್ಥೈಸಿಕೊಳ್ಳುವರು.
4] ದಲಿತರ ಹೋರಾಟಗಳನ್ನು ಅರಿಯುವರು.
5] ಕನ್ನಡ ಕಾವಲು ಚಳವಳಿಗಳ ಪ್ರಸ್ತುತತೆಯನ್ನು ಅರಿತು ಅವುಗಳ ಬಗ್ಗೆ ಆಸಕ್ತಿ ವಹಿಸುವರು.
6] ಪಂಚಾಯತ್ ರಾಜ್ ವ್ಯವಸ್ಥೆಯ ಅವಶ್ಯಕತೆಯನ್ನು ಮೆಚ್ಚುವರು.



## 1. ಪರಿಸರ ಚಳವಳಿ

ನಮ್ಮ ಭೂಮಿಯ ಭಾಗವಾಗಿರುವ ಮಣ್ಣು ಕಲ್ಲು, ನೀರು, ಗಾಳಿ, ಬೆಳಕುಗಳನ್ನು ಅವಲಂಬಿಸಿ ಪಶುಪಕ್ಷಿಗಳು, ಗಿಡಮರಗಳು ಮತ್ತು ಮನುಷ್ಯ ಸೇರಿದಂತೆ ಉಳಿದೆಲ್ಲ ಜೀವಿಗಳು ಬದುಕಬೇಕಾಗಿದೆ. ಪ್ರಕೃತಿಯಲ್ಲಿ ಸಹಜ ಸಮತೋಲನವಿದೆ. ಮನುಷ್ಯ ನಾಗರಿಕನಾಗಿ ಬೆಳೆಯುತ್ತಿದ್ದಂತೆ ಪರಿಸರವನ್ನು ತನ್ನ ಅಂಕೆಯಿಲ್ಲದ ಆಸೆಗಳಿಗೆ ಬಲಿಕೊಡುತ್ತಿದ್ದಾನೆ. ಪ್ರಕೃತಿಯನ್ನು ಸೃಷ್ಟಿಯ ಬೆಡಗು ಎಂದು ಅರಿಯದೆ ಕೇವಲ ತನ್ನ ಉಪಯೋಗಕ್ಕಾಗಿ ಇರುವ ಕಚ್ಚಾವಸ್ತುವೆಂದು ಪರಿಗಣಿಸಿದ್ದಾನೆ. ಮನೆಮನೆಯಲ್ಲಿ ಕಾಣಿಸಿಕೊಳ್ಳುತ್ತಿದ್ದ ಗುಬ್ಬಚ್ಚಿಗಳನ್ನು ನೋಡಲು ಊರ ಹೊರಗಡೆ ಹೋಗಬೇಕಾದ ಪರಿಸ್ಥಿತಿ ಬಂದೊದಗಿದೆ.

ಭೂಮಿಯಲ್ಲಿರುವ ಜೈವಿಕ ಮತ್ತು ಅಜೈವಿಕ ಅಂಶಗಳೇ ಪರಿಸರ.

ಕೈಗಾರಿಕಾ ಕ್ರಾಂತಿ, ವಾಣಿಜ್ಯ ವ್ಯಾಪಾರದ ಕ್ರಾಂತಿಗಳುಂಟಾಗಿ ಪರಿಸರವು ತೀವ್ರವಾಗಿ ಹದಗೆಟ್ಟಿದೆ. ದೊಡ್ಡ ದೊಡ್ಡ ಕೈಗಾರಿಕೋದ್ಯಮಿಗಳು ಪರಿಸರದ ಸಂಪತ್ತಿನ ಮೇಲೆ ತಮ್ಮ ಹಿಡಿತವನ್ನು ಸಾಧಿಸಲು ನಿರಂತರ ಪ್ರಯತ್ನಿಸುತ್ತಿದ್ದಾರೆ. ಇದರಿಂದ ಅನೇಕ ಹೊಸ ಸಮಸ್ಯೆಗಳು ಸೃಷ್ಟಿಯಾಗಿವೆ. ಜನ ಸಮುದಾಯಗಳು ಗಂಭೀರ ಆರೋಗ್ಯ ಸಮಸ್ಯೆಗಳಿಗೆ ತುತ್ತಾಗುತ್ತಿವೆ. ಒಟ್ಟಾರೆ ಪ್ರಾಕೃತಿಕ ಸಂಪತ್ತಿನ ನಾಶದಿಂದ ಬಹುಸಂಖ್ಯಾ ನಾಗರಿಕರು ತೀವ್ರ ಸಂಕಟವನ್ನು ಎದುರಿಸುತ್ತಿದ್ದಾರೆ. 20ನೇ ಶತಮಾನದ ಉತ್ತರಾರ್ಧದಲ್ಲಿ ಜನರಲ್ಲಿ ಹೊಸ ಎಚ್ಚರವನ್ನು ಮೂಡಿಸುವ ಸಲುವಾಗಿ ಪರಿಸರ ಜಾಗೃತಿ ಚಳವಳಿಗಳು ಆರಂಭವಾದವು. 1970ರ ದಶಕದಲ್ಲಿ ಪರಿಸರ ಚಳವಳಿ ಜಾಗತಿಕ ಮಟ್ಟದಲ್ಲಿ ಆರಂಭಗೊಂಡು ಕರ್ನಾಟಕವನ್ನು ತಲುಪಿತು.

ಗಾಂಧೀಜಿಯವರು ಹೇಳುವಂತೆ, "ಭೂಮಿಯು ಎಲ್ಲರ ಅವಶ್ಯಕತೆಯನ್ನು ಪೂರೈಸುತ್ತದೆ. ಆದರೆ ಅವರ ದುರಾಸೆಯನ್ನಲ್ಲ".

ಪಶ್ಚಿಮ ಘಟ್ಟಗಳ ಪ್ರದೇಶದಲ್ಲಿ ಗಣಿಗಾರಿಕೆ ಪ್ರಾರಂಭವಾದುದರಿಂದ ಪರಿಸರ ಸಂರಕ್ಷಣಾ ಚಳವಳಿ ಅನಿವಾರ್ಯವಾಯಿತು. 'ಸಹ್ಯಾದ್ರಿ ಗಣಿ ವಿರೋಧಿ ವೇದಿಕೆ' ಪ್ರಾರಂಭವಾಗಿ ಕುದುರೆಮುಖ ಮತ್ತು ಇತರ ಪ್ರದೇಶಗಳ ಗಣಿಗಾರಿಕೆಯನ್ನು ವಿರೋಧಿಸಿತು. ಕೇಂದ್ರ ಸರಕಾರವೇ ಕಬ್ಬಿಣದ ಗಣಿಗಾರಿಕೆಯ ಕಂಪನಿಯನ್ನು ಪ್ರಾರಂಭಿಸಿತ್ತು. ಈ ಗಣಿಗಾರಿಕೆಯಿಂದ ಭದ್ರಾ ನದಿಯ ಮೂಲವೇ ಮಲಿನವಾಯಿತು. ಈ ಹೋರಾಟದಿಂದ ಸರಕಾರದ ಮೇಲೆ ತೀವ್ರ ಒತ್ತಡವುಂಟಾಗಿ ಕ್ರಮೇಣ ಸರ್ಕಾರವು ಪರಿಸರ ರಕ್ಷಣೆಯ ಕ್ರಮಗಳನ್ನು ಕೈಗೊಂಡಿತು.

**ಸಾಲುಮರದ ತಿಮ್ಮಕ್ಕ:** ಇಂದಿಗೂ ಹೋರಾಟ ನಡೆಸುತ್ತಿರುವ 'ಸಾಲುಮರದ ತಿಮ್ಮಕ್ಕ' 284 ಮರಗಳ ತಾಯಿ. ಅಕ್ಷರಸ್ಥರಲ್ಲದಿದ್ದರೂ ಪರಿಸರ ಸಂರಕ್ಷಣೆಯ ಪಾಠ ಹೇಳಿಕೊಟ್ಟ ನಿಸ್ವಾರ್ಥ ಬದುಕು ಇವರದು.



ಸಹ್ಯಾದ್ರಿ ಶ್ರೇಣಿಯ ಪ್ರಮುಖ ನದಿಯಾದ ತುಂಗಾ ಕಲುಷಿತವಾಗುತ್ತಿರುವುದನ್ನು ಗಮನಿಸಿ 'ತುಂಗಾ ಮೂಲವನ್ನು ಉಳಿಸಿ' ಆಂದೋಲನವನ್ನು ಆರಂಭಿಸಲಾಯಿತು. ಸಹ್ಯಾದ್ರಿ ಪರ್ವತ ಶ್ರೇಣಿಯ ಅರಣ್ಯ ಪ್ರದೇಶಗಳು ಕ್ರಮೇಣ ಬರಿದಾಗತೊಡಗಿದವು. ಗಿಡಮರಗಳನ್ನು ಉಳಿಸಿ ಬೆಳೆಸುವ ಉದ್ದೇಶದಿಂದ ಅದರ ನಾಶವನ್ನು ತಡೆಯಲು ಭಾರತದ ವಿವಿಧ ಪ್ರದೇಶಗಳಲ್ಲಿ 'ಚಿಪ್ಕೊ' ಅಥವಾ 'ಅಪ್ಪಿಕೊ' ಚಳವಳಿಗಳು ಆರಂಭಗೊಂಡವು. ಚಿಪ್ಕೊ ಚಳವಳಿಯಲ್ಲಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ಸುಂದರಲಾಲ್ ಬಹುಗುಣ ಅವರ ಪಾತ್ರವನ್ನು ನಾವು ಮರೆಯುವಂತಿಲ್ಲ.

**ಚಟುವಟಿಕೆ :** ಅಪ್ಪಿಕೊ ಚಳವಳಿಯ ಧ್ಯೇಯೋದ್ದೇಶಗಳನ್ನು ಪಟ್ಟಿಮಾಡಿರಿ.

ಅರಣ್ಯ ಇಲಾಖೆಯು ನೀಲಗಿರಿ, ಅಕೇಶಿಯಾಗಳಂತಹ ಆಮದು ಸಸ್ಯಗಳನ್ನು ನೆಡಲಾರಂಭಿಸಿತು. ಈ ಯೋಜನೆಯನ್ನು 'ಸಾಮಾಜಿಕ ಅರಣ್ಯ'ವೆನ್ನುವರು. ನೀಲಗಿರಿಯು ಅಂತರ್ಜಲದ ಮಟ್ಟವನ್ನು ಕೆಳಕ್ಕೆ ತಳ್ಳುತ್ತದೆ ಎಂದು ಅದರ ನೆಡುವಿಕೆಯನ್ನು ಪರಿಸರವಾದಿಗಳು ವಿರೋಧಿಸಿದರು.

ದಾವಣಗೆರೆ ಜಿಲ್ಲೆಯ ಹರಿಹರ ಪಾಲಿಫೈಬರ್ ಕೈಗಾರಿಕೆಯು ತ್ಯಾಜ್ಯವಸ್ತುಗಳನ್ನು ತುಂಗಭದ್ರಾ ನದಿಗೆ ಬಿಟ್ಟು ನದಿಯ ನೀರನ್ನು ಹಾಳು ಮಾಡುವುದರ ವಿರುದ್ಧ ಹೋರಾಟ ನಡೆಯಿತು. ಇತರ ಚಳವಳಿಗಳೆಂದರೆ ಕಾರವಾರದ ಸೀಬರ್ಡ್ ನೌಕಾನೆಲೆಯ ವಿರುದ್ಧದ ಹೋರಾಟ, ಕರಾವಳಿಯಲ್ಲಿ ಕೋಜೆಂಟ್ರಿಕ್ಸ್ ನಾಗಾರ್ಜುನ ವಿದ್ಯುತ್ ಯೋಜನೆಯ ವಿರುದ್ಧ ಹೋರಾಟ. ಕೆರೆಗಳನ್ನು ಉಳಿಸಿ ಹೋರಾಟ, ಭದ್ರಾ ಮೇಲ್ದಂಡೆ ಯೋಜನೆಯ ವಿರುದ್ಧದ ಹೋರಾಟ, ಕಬ್ಬನ್ ಪಾರ್ಕ್ ಉಳಿಸಿ, ಕಾರ್ಗಿಲ್ ಸೀಡ್ಸ್ ಸಂಸ್ಥೆಯ ವಿರುದ್ಧದ ಹೋರಾಟ, ಕೈಗಾರಿಕಾ ನಗರಗಳ ವಿರುದ್ಧದ ಹೋರಾಟ ಮುಂತಾದವು.

ತೀರ ಇತ್ತೀಚಿಗೆ ರಾಷ್ಟ್ರೀಯ ಮತ್ತು ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಸುದ್ದಿ ಮಾಡಿದವುಗಳೆಂದರೆ ಕರ್ನಾಟಕದಲ್ಲಿ ನಡೆದ ಗಣಿಗಾರಿಕೆ ವಿರುದ್ಧದ ಚಳವಳಿಗಳು. ಬಳ್ಳಾರಿ, ತುಮಕೂರು, ಚಿತ್ರದುರ್ಗ, ಚಿಕ್ಕಮಗಳೂರು, ಉತ್ತರ ಕನ್ನಡ, ದಾವಣಗೆರೆ, ರಾಮನಗರ ಮುಂತಾದ ಜಿಲ್ಲೆಗಳಲ್ಲಿ ಗಣಿ ಸಂಪತ್ತನ್ನು ಲೂಟಿ ಹೊಡೆಯುವ ಶಕ್ತಿಗಳ ವಿರುದ್ಧ ಈ ಚಳವಳಿಗಳು ಪ್ರಾರಂಭವಾದವು. ಭಾರತದ ಸರ್ವೋಚ್ಚ ನ್ಯಾಯಾಲಯವು ಪರಿಸರ ಸಂರಕ್ಷಣೆಯನ್ನು ಗಂಭೀರವಾಗಿ ಪರಿಗಣಿಸಿ ತೀರ್ಪುಗಳನ್ನು ನೀಡುತ್ತಿದೆ.

ಕರ್ನಾಟಕ ಲೋಕಾಯುಕ್ತ ಸಂಸ್ಥೆಯು ಸಾರ್ವಜನಿಕ ಹಿತಾಸಕ್ತಿ ದಾವೆಗಳನ್ನು ಪರಿಗಣಿಸಿ ಅಕ್ರಮ ಗಣಿಗಾರಿಕೆಯ ಕುರಿತು ನಡೆಸಿದ ಕೂಲಂಕಷ ತನಿಖೆಗಳು ಹಾಗೂ ಸುದೀರ್ಘ ವರದಿಗಳು ಉಲ್ಲೇಖಾರ್ಹವಾದುದು. ಇವೆಲ್ಲವುಗಳ ಪರಿಣಾಮವಾಗಿ ಪ್ರಕೃತಿಯ ಶೋಷಣೆ ಕಡಿಮೆಯಾಗುತ್ತಿದೆ. ಇಂದೂ ಅನೇಕ ಹೋರಾಟಗಳು ಮುಂದುವರಿದಿವೆ. ಕೃತಕ ರಾಸಾಯನಿಕದಿಂದ ಭೂಮಿಯನ್ನು ಹಾಳುಮಾಡುವ ಪದ್ಧತಿಗೆ ಪರ್ಯಾಯವಾಗಿ ನೈಸರ್ಗಿಕ ಸಾವಯವ ಕೃಷಿ ಪದ್ಧತಿಯನ್ನು ಅನುಸರಿಸುವಂತೆ ಒತ್ತಾಯಿಸುವ ಹೋರಾಟವು ಒಂದು ಕ್ರಾಂತಿಯ ರೂಪವನ್ನು ತಳೆಯುತ್ತಿರುವುದು. ಇದು ಸಮಾಧಾನದ ಸಂಗತಿಯಾಗಿದೆ. ಕರ್ನಾಟಕದಲ್ಲಿ 'ಸಾವಯವ ಕೃಷಿ ಮಿಷನ್' ಸ್ಥಾಪನೆಗೊಂಡು ಸಾವಯವ ಕೃಷಿಗೆ ಪ್ರೋತ್ಸಾಹ ಸಿಗುತ್ತಿದೆ. ನೂರಾರು ಮಂದಿ ಕೃಷಿಕರು ಸಾವಯವ ಕೃಷಿಯ ಲಾಭ ಪಡೆಯುತ್ತಿದ್ದಾರೆ. ಈ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಭಾರತದಲ್ಲೇ ಮುಂಚೂಣಿಯಲ್ಲಿದೆ. ಆದರೂ ಸಾಗಬೇಕಾದ ದಾರಿ ತುಂಬ ಇದೆ.

## 2. ಮಹಿಳಾ ಚಳವಳಿ

ಮಹಿಳಾ ಚಳವಳಿಯು ಆರಂಭದಲ್ಲಿ ಮುಖ್ಯವಾಗಿ ಸ್ತ್ರೀ ಶಿಕ್ಷಣಕ್ಕೆ ಒತ್ತು ನೀಡಿತು. ಕರ್ನಾಟಕದಲ್ಲಿ ಶ್ರೀರಂಗಮ್ಮ ಮತ್ತು ರುಕ್ಮಿಣಮ್ಮ ಎಂಬವರು ಬಿ.ಎ. ಆನರ್ಸ್ ಪದವಿ ಗಳಿಸಿದ ಮೊದಲ ಮಹಿಳೆಯರು. ಇಂದಿರಮ್ಮ ಎಂಬುವರು ಬೆಂಗಳೂರಿನ ಪ್ರಥಮ ಮಹಿಳಾ ಮೇಯರ್ ಆಗಿದ್ದರು. ಇಷ್ಟಾದರೂ ಮಹಿಳೆಯರ ಸಬಲೀಕರಣವೆನ್ನುವುದು ಮರೀಚಿಕೆಯಾಗಿತ್ತು. ಮಹಿಳೆಯರಿಗೆ ಆಸ್ತಿಯಲ್ಲಿ

ಪಾಲು ಸಿಗುತ್ತಿರಲಿಲ್ಲ. ವಿವಿಧ ಧರ್ಮೀಯ ಮಹಿಳೆಯರು ಬೇರೆ ಬೇರೆ ಬಗೆಯಲ್ಲಿ ಶೋಷಣೆಗೆ ಒಳಗಾಗಿದ್ದಾರೆ.

**ಚಟುವಟಿಕೆ :** ವಿವಿಧ ಕ್ಷೇತ್ರಗಳಲ್ಲಿ ಸಾಧನೆಯನ್ನು ಮಾಡಿರುವ ಮಹಿಳೆಯರನ್ನು ಪಟ್ಟಿಮಾಡಿರಿ.

ಅನೇಕ ಮಂದಿ ಮಹಿಳೆಯರು ಕುಟುಂಬದ ಚೌಕಟ್ಟಿನಿಂದ ಹೊರಗೆ ಬಂದು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ, ದೇಶಸೇವೆಗೆ ಮುಂದಾದರು. ಕಮಲಾದೇವಿ ಚಟ್ಟೋಪಾಧ್ಯಾಯ, ಸರೋಜಿನಿ ನಾಯ್ಡು, ಅರುಣಾ ಅಸಫ್ ಅಲಿ, ಡಾ. ಮುತ್ತುಲಕ್ಷ್ಮಿ ರೆಡ್ಡಿ ಮುಂತಾದವರನ್ನು ನಾವಿಲ್ಲಿ ಸ್ಮರಿಸಬಹುದು.


ಅರುಣಾ ಅಸಫ್ ಅಲಿ

1975ರಲ್ಲಿ ಅಂತರ್‌ರಾಷ್ಟ್ರೀಯ ಮಹಿಳಾ ವರ್ಷಾಚರಣೆ ಪ್ರಾರಂಭವಾಯಿತು. ಕರ್ನಾಟಕ ಸರಕಾರ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಂಡಿತು. ಕ್ರಮೇಣ ಮಹಿಳಾ ಸಂಘಟನೆಗಳು ಸಕ್ರಿಯವಾದವು. ಎಡಪಂಥೀಯ ಸಂಘಟನೆಗಳು ಕಾರ್ಮಿಕ ಮಹಿಳೆಯರನ್ನು ಸಂಘಟಿಸುವ ಕೆಲಸವನ್ನು ಮಾಡಿದವು. ಮಹಿಳಾ ಸಂಘಟನೆಗಳು ವರದಕ್ಷಿಣೆ, ಅತ್ಯಾಚಾರ, ಕೌಟುಂಬಿಕ ಹಿಂಸೆಯನ್ನು ವಿರೋಧಿಸಿದವು. ಹಾಗೆಯೇ ಮಹಿಳೆಯರ ಹಕ್ಕುಗಳ ಪ್ರತಿಪಾದನೆಗೆ ಕಾನೂನು ಮಾರ್ಗವನ್ನು ಬಲಪಡಿಸಲು ಒತ್ತಡ ಹೇರಲಾಯಿತು. ಚುನಾವಣೆಯಲ್ಲಿ ಮಹಿಳೆಯರಿಗೆ ಶೇಕಡ 33ರಷ್ಟು ಸ್ಥಾನಗಳನ್ನು ಮೀಸಲಿಡುವ ಮೂಲಕ ಶಾಸನಸಭೆಗಳಲ್ಲಿ ಅವರ ನಿರ್ಣಾಯಕ ಪಾತ್ರವಿರಬೇಕೆಂದು ಈ ಸಂಘಟನೆಗಳು ಹೋರಾಡುತ್ತಿವೆ.

ಈ ಎಲ್ಲಾ ಹೋರಾಟಗಳ ಫಲವಾಗಿ ಸರ್ಕಾರ ಅನೇಕ ಸುಧಾರಣಾ ಕ್ರಮಗಳನ್ನು ಜಾರಿಗೊಳಿಸಿದೆ. ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡಾ 50ರಷ್ಟು ಸ್ಥಾನವನ್ನು ಮಹಿಳೆಯರಿಗೆ ಕಾದಿರಿಸುವ ಆದೇಶ ಹೊರಡಿಸಿದ ಮೊದಲ ರಾಜ್ಯ ಕರ್ನಾಟಕ. ಸರಕಾರಿ ನೇಮಕಾತಿಯಲ್ಲಿಯೂ ಮಹಿಳೆಯರಿಗೆ ಶೇಕಡ 33ರಷ್ಟು ಮೀಸಲಾತಿ ನೀಡಿರುವ ಮೂಲಕ ಸ್ವಲ್ಪ ಮಟ್ಟಿಗೆ ಮಹಿಳೆಯರಿಗೆ ನ್ಯಾಯ ಒದಗಿಸಿದೆ. ಹೆಣ್ಣುಮಕ್ಕಳ ಹಾಗೂ ಮಹಿಳೆಯರ ಹಿತರಕ್ಷಣೆಗಾಗಿ ಸರ್ಕಾರವು ಮಹಿಳಾ ಆಯೋಗವನ್ನು ಸ್ಥಾಪಿಸಿದೆ. ಇದು ಸ್ತ್ರೀಯರ ಶೋಷಣೆಯ ವಿರುದ್ಧ ಧ್ವನಿ ಎತ್ತುವುದರ ಮೂಲಕ ಅವರಿಗೆ ನ್ಯಾಯ ದೊರಕಿಸಿಕೊಡಲು ಪ್ರಯತ್ನಿಸುತ್ತಿದೆ.

## 3. ರೈತ ಚಳವಳಿ

ರೈತರನ್ನು ನಮ್ಮ ದೇಶದ ಬೆನ್ನೆಲುಬು ಎಂದು ಮೊದಲಿನಿಂದಲು ಕರೆಯಲಾಗಿದೆ. ಆದರೆ ಈ ಬೆನ್ನೆಲುಬು ಗಟ್ಟಿಯಾಗಿರಲು ಬೇಕಾದ ಅವಶ್ಯಕತೆಗಳನ್ನು ಒದಗಿಸಿಲ್ಲ. ಇಂದೂ ಸಹ ನಮ್ಮ ರೈತರು ಸರಕಾರದ ನೆರವಿಲ್ಲದೆ ಬದುಕಲಾರದ ಸ್ಥಿತಿಯಲ್ಲಿದ್ದಾರೆ. ಕೈಗಾರಿಕೋದ್ಯಮಿಗಳು ತಾವು ಉತ್ಪಾದಿಸಿದ ವಸ್ತುವಿನ ಬೆಲೆಯನ್ನು ತಾವೇ ನಿರ್ಧರಿಸುತ್ತಾರೆ. ಆದರೆ ರೈತರು ಇಂದಿಗೂ ತಮ್ಮ ಉತ್ಪನ್ನಗಳ ಬೆಲೆ

ನಿರ್ಧರಿಸುವ ಹಂತಕ್ಕೆ ಬೆಳೆದಿಲ್ಲ. ಅವರು ವರುಣನ ಕೃಪೆ ಅಥವಾ ಅವಕೃಪೆಗೆ ಸದಾ ಒಳಗಾಗಿದ್ದಾರೆ. ತಮ್ಮನ್ನು ರಕ್ಷಿಸಬೇಕಾದ ಸರಕಾರಗಳು ತಮ್ಮ ಕಷ್ಟದ ದಿನಗಳಲ್ಲಿ ನೆರವಿಗೆ ಬಾರದಿದ್ದಾಗ ರೈತರು ಹೋರಾಟದ ಹಾದಿಗಳನ್ನು ತುಳಿದಿದ್ದಾರೆ. ಅನೇಕ ರೈತರು ಈ ಹೋರಾಟಗಳಲ್ಲಿ ಪ್ರಾಣತೆತ್ತು ಹುತಾತ್ಮರಾಗಿದ್ದಾರೆ. ಶತಮಾನಗಳಿಂದಲೂ ರೈತರು ಹೋರಾಟ ಮಾಡಿಕೊಂಡೇ ಬಂದಿದ್ದರೂ ಅವರ ಹಸನಾದ ಬದುಕಿನ ಕನಸು ಇನ್ನೂ ದೂರವಿದೆ.

ರೈತ ಹೋರಾಟಗಳು ಪ್ರಮುಖವಾಗಿ ಭೂಮಾಲೀಕರ ವಿರುದ್ಧ ನಡೆದವು. ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ನಾವು ಕಾಣುವ ಪ್ರಥಮ ರೈತ ಹೋರಾಟ 1951ರಲ್ಲಿ ಶಿವಮೊಗ್ಗ ಜಿಲ್ಲೆಯ ಕಾಗೋಡಿನಲ್ಲಿ ನಡೆಯಿತು. ರೈತರು ಗೇಣಿಯನ್ನು ಅಳತೆ ಮಾಡುವ 'ಕೊಳಗ'ದ ವಿರುದ್ಧ ಹೋರಾಟ ಪ್ರಾರಂಭಮಾಡಿದರು. ಕ್ರಮೇಣ ರೈತರ ಶೋಷಣೆಯ ವಿಷಯಗಳಾದ ಸಾಲದ ವಸೂಲಿ, ಗೇಣಿದಾರರಿಗೆ ನೀಡುತ್ತಿದ್ದ ಕಿರುಕುಳ ಮುಂತಾದ ಪ್ರಮುಖ ಸಮಸ್ಯೆಗಳ ವಿರುದ್ಧ ರೈತರು ಹೋರಾಟ ಮುಂದುವರೆಸಿದರು. ಸಮಾಜವಾದಿ ಪಕ್ಷದ ಶಾಂತವೇರಿ ಗೋಪಾಲ ಗೌಡರು ಈ ಹೋರಾಟದ ಮುಂಚೂಣಿಯಲ್ಲಿದ್ದರು. ಡಾ. ರಾಮಮನೋಹರ ಲೋಹಿಯಾ ಅವರು ಭೇಟಿ ನೀಡಿ ಈ ಹೋರಾಟಕ್ಕೆ ಹೊಸ ಶಕ್ತಿಯನ್ನು ತಂದುಕೊಟ್ಟರು.

**ಚಟುವಟಿಕೆ :** ನಾ. ಡಿ'ಸೋಜ ಅವರ 'ಕೊಳಗ' ಕಾದಂಬರಿಯನ್ನು ಓದಿ ರೈತರ ಸ್ಥಿತಿಗತಿಯನ್ನು ಕುರಿತು ಪ್ರಬಂಧ ಬರೆಯಿರಿ.



1950ರ ದಶಕದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಮಾಜವಾದಿಗಳು ರೈತ ಹೋರಾಟ ನಡೆಸಿದರು. 1972ರಲ್ಲಿ ಕೋಲಾರದಲ್ಲಿ ಭೂಆಕ್ರಮಣ ಚಳವಳಿ ನಡೆಯಿತು. 1980ರಲ್ಲಿ ಮಲಪ್ರಭಾ ನದಿ ಭಾಗದ ರೈತರು ಹತ್ತಿ ಬೆಳೆ ನೆಲಕಚ್ಚಿದಾಗ ಪ್ರತಿಭಟಿಸಿದರು. ಕೆಲವರು ಪೋಲೀಸರ ಗುಂಡಿಗೆ ಬಲಿಯಾದರು. ರೈತರು ಸರಕಾರದ ವಿರುದ್ಧ ಅಸಹಕಾರ ಚಳವಳಿಯನ್ನು ಮುಂದುವರಿಸಿದರು. ಈ ಸಂದರ್ಭದಲ್ಲಿ ಇಪ್ಪತ್ತಕ್ಕೂ ಹೆಚ್ಚು ರೈತರು ನವಲಗುಂದ, ನರಗುಂದ ಮತ್ತು ಸವದತ್ತಿಯಲ್ಲಿ ಪ್ರಾಣತೆತ್ತರು.

ಈ ಹಿನ್ನೆಲೆಯಲ್ಲಿ ರೈತರು ತಮ್ಮದೆ ಆದ ಸಂಘಟನೆಗಳನ್ನು ಕಟ್ಟಿಕೊಂಡರು. ಕರ್ನಾಟಕ ರಾಜ್ಯ ರೈತ ಸಂಘ ಶಿವಮೊಗ್ಗ ಜಿಲ್ಲೆಯಲ್ಲಿ ಆರಂಭಗೊಂಡು, ಸ್ಥಳೀಯ ಸಮಸ್ಯೆಗಳನ್ನು ಕೈಗೆತ್ತಿಕೊಂಡಿತು. ದೂರಗಾಮಿ ನೇತ್ಯಾತ್ಮಕ ಪರಿಣಾಮಗಳನ್ನು ಸೃಷ್ಟಿ ಮಾಡಹೊರಟ ವಿದೇಶಿ ಕಂಪನಿಗಳ ಆಗಮನವನ್ನು ವಿರೋಧಿಸಿತು. ಕರ್ನಾಟಕ ಪ್ರಾಂತ ರೈತ ಸಂಘ, ಕಿಸಾನ್ ಸಭಾ, ದಲಿತ ಸಂಘರ್ಷ ಸಮಿತಿ, ರೈತ ಕೂಲಿ ಕಾರ್ಮಿಕರ ಸಂಘ ಮುಂತಾದ ಸಂಘಟನೆಗಳು ರೈತರ ಸಮಸ್ಯೆಗಳಿಗೆ ಹೋರಾಟದ ದನಿಯಾದವು.

**ಚಟುವಟಿಕೆ :** ಬಾಗೂರು ನವಿಲೆ ಚಳವಳಿಯನ್ನು ಕುರಿತು ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿರಿ.



ಎಂ.ಡಿ. ನಂಜುಂಡ ಸ್ವಾಮಿ

ರೈತ ಚಳವಳಿಯ ಮುಖಂಡರಲ್ಲಿ ಎಂ.ಡಿ. ನಂಜುಂಡಸ್ವಾಮಿ, ಸುಂದರೇಶ್, ಪುಟ್ಟಣ್ಣಯ್ಯ, ಕಡಿದಾಳು ಶಾಮಣ್ಣ ಮೊದಲಾದವರು ಪ್ರಮುಖರಾಗಿದ್ದಾರೆ.

## 4. ದಲಿತ ಚಳವಳಿ

ಪ್ರಸಿದ್ಧ ಮನಃಶಾಸ್ತ್ರಜ್ಞ ಆರ್.ಡಿ. ಲಿಯಾಂಗ್ ಒಂದು ಅದ್ಭುತವಾದ ಮಾತನ್ನು ದಾಖಲಿಸುತ್ತಾರೆ: "ಇತರರ ಅನುಭವವನ್ನು ನೀವು ಅರ್ಥಮಾಡಿಕೊಳ್ಳಲು ಸಾಧ್ಯವಿದೆ. ಆದರೆ ಆ ಅನುಭವವನ್ನು ನೀವು ಅನುಭವಿಸಲು ಸಾಧ್ಯವೇ ಇಲ್ಲ". ದಲಿತ ಮತ್ತು ಮಹಿಳಾ ನೆಲೆಗಳಿಗೆ ಇದು ಅಕ್ಷರಶಃ ಅನ್ವಯವಾಗುತ್ತದೆ. ದಲಿತರಿಗೆ ವರ್ಣವ್ಯವಸ್ಥೆಯಲ್ಲೂ ಸ್ಥಾನವಿರಲಿಲ್ಲ. ಅವರು ಶೂದ್ರಾತಿ ಶೂದ್ರರಾಗಿದ್ದರು. ಸಾಮಾಜಿಕವಾಗಿ ಯಾವುದೇ ಸ್ಥಾನವನ್ನು ಹೊಂದಿರದ ಅಸ್ಪೃಶ್ಯ ಜಾತಿಗಳಲ್ಲಿ ಹುಟ್ಟಿದ ಒಂದೇ ಕಾರಣಕ್ಕಾಗಿ ಈ ಸಮುದಾಯ ಸಮಾಜದ ಮುಖ್ಯ ವಾಹಿನಿಯಿಂದ ಹೊರಗುಳಿಯಿತು. ಇದರ ವಿರುದ್ಧ ನಡೆದ ಅನೇಕ ಹೋರಾಟಗಳನ್ನು ಚರಿತ್ರೆಯ ಉದ್ದಕ್ಕೂ ನಾವು ಕಾಣುತ್ತೇವೆ. ಆದರೆ ವಸಾಹತುಶಾಹಿ ಕಾಲಘಟ್ಟದಲ್ಲಿ ದಲಿತರಿಗೆ ಸಂಬಂಧಿಸಿದ ವಿಷಯಗಳು ರಾಷ್ಟ್ರೀಯ ಹಂತದಲ್ಲಿ ಚರ್ಚೆ, ಸಂವಾದಗಳಿಗೆ ಒಳಗಾದವು. ಗಾಂಧೀಜಿ ಮತ್ತು ಅಂಬೇಡ್ಕರ್ ಅವರ ನಡುವಿನ 1930ರ ದಶಕದ ಚರ್ಚೆಗಳೇ ಇದಕ್ಕೆ ಪ್ರಮುಖ ಸಾಕ್ಷಿ. ಇಬ್ಬರ ಗುರಿ ಒಂದೇ ಆದರೂ ಸಾಗಿದ ಮಾರ್ಗಗಳು ಬೇರೆಯಾಗಿದ್ದವು.

ಸ್ವಾಮಿ ವಿವೇಕಾನಂದರ ಮೈಸೂರಿನ ಭೇಟಿಯ ನಂತರ ಅವರ ಸಲಹೆಯ ಮೇರೆಗೆ ದಲಿತ ವರ್ಗದ ಪ್ರಮುಖ ಪ್ರಶ್ನೆಗಳನ್ನು ಅಂದಿನ ಮೈಸೂರಿನ ಮಹಾರಾಜರಾದ ಹತ್ತನೇ ಚಾಮರಾಜ ಒಡೆಯರು ಗಂಭೀರವಾಗಿ ಪರಿಗಣಿಸಿ ದಲಿತರಿಗೆ ಪ್ರತ್ಯೇಕ ಶಾಲೆಗಳನ್ನು ತೆರೆದರು.

1936ರಲ್ಲಿ ದಕ್ಷಿಣ ಭಾರತದ ದಲಿತ ನಾಯಕರಲ್ಲಿ ಪ್ರಮುಖರಾದ ಎಂ.ಸಿ. ರಾಜಾ ಅವರ ಸಮ್ಮುಖದಲ್ಲಿ ಮೈಸೂರು ಅರಮನೆಗೆ ದಲಿತರ ಪ್ರವೇಶವಾಯಿತು.

ಹಿಂದೆ ದಲಿತರ ಪರವಾಗಿ ಬಹುತೇಕ ದಲಿತೇತರರು ಹೋರಾಟ ಮಾಡಿದರು. ಈಗ ದಲಿತರೇ ತಮ್ಮ ಸಮಸ್ಯೆಗಳನ್ನು ತಾವೇ ಪ್ರತಿನಿಧಿಸತೊಡಗಿದ್ದಾರೆ. ಇವರಿಗೆ ಮೂಲ ಸ್ಫೂರ್ತಿ ಅಂಬೇಡ್ಕರರ ಸೈದ್ಧಾಂತಿಕ ನಿಲುವುಗಳು. ಶಿಕ್ಷಣ, ಸಂಘಟನೆ ಮತ್ತು ಹೋರಾಟಗಳು ದಲಿತ ಚಳವಳಿಗಳ ಬೀಜಮಂತ್ರಗಳಾದವು. ದಲಿತರ ಸಮಸ್ಯೆಗಳ ಪರಿಹಾರಕ್ಕೆ ರಾಜಕೀಯ ಸಾಧನೆಯನ್ನು ತಮ್ಮ ಧ್ಯೇಯವಾಗಿಸಿಕೊಂಡು ಸಂಘಟನಾತ್ಮಕವಾಗಿ ಜಾಗೃತರಾಗತೊಡಗಿದರು.

ದಲಿತ ವರ್ಗಗಳಲ್ಲಿ ಅಂಬೇಡ್ಕರರು ಅವರ ಸ್ವಾಭಿಮಾನದ ಸಂಕೇತವಾದರಲ್ಲದೆ 'ದಲಿತ ಸೂರ್ಯ' ಎಂಬ ಕೀರ್ತಿಗೆ ಪಾತ್ರರಾದರು. ಈ ಎಲ್ಲ ಬೆಳವಣಿಗೆಗಳ ಪ್ರತಿಧ್ವನಿಗಳು ಕರ್ನಾಟಕದಲ್ಲಿ ಮೊಳಗುವಂತಾಯಿತು.

ಇಪ್ಪತ್ತನೇ ಶತಮಾನದಲ್ಲಿ ಹುಟ್ಟಿ ಬೆಳೆದ ಬ್ರಾಹ್ಮಣೇತರ ಚಳವಳಿಗಳು ದಲಿತರನ್ನು ಹೆಚ್ಚು ಒಳಗೊಳ್ಳಲಿಲ್ಲ. ಇದನ್ನು ಪ್ರಶ್ನಿಸುತ್ತಾ 1970ರ ದಶಕದಲ್ಲಿ 'ದಲಿತ ಚಳವಳಿ'ಯು ರೂಪುಗೊಂಡು ಒಂದು ನಿರ್ಣಾಯಕ ಶಕ್ತಿಯಾಗಿ ಬೆಳೆಯಿತು. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಶಾಮಸುಂದರ್ ಅವರು 1970ರಲ್ಲಿ ಭೀಮಸೇನಾ ಸಂಘಟನೆಯನ್ನು ಹುಟ್ಟುಹಾಕಿದರು. ದಲಿತ ಚಳವಳಿಗೆ ಒಂದು ಹೊಸ ತಿರುವನ್ನು ಕೊಟ್ಟಿದ್ದು 'ಬಸವಲಿಂಗಪ್ಪ ಬೂಸಾ ಪ್ರಕರಣ' (1973).

ಸಚಿವರಾಗಿದ್ದ ಬಸವಲಿಂಗಪ್ಪನವರು ಮೈಸೂರಿನ ಕಾರ್ಯಕ್ರಮವೊಂದರಲ್ಲಿ ಕನ್ನಡ ಸಾಹಿತ್ಯ ಬೂಸಾ ಸಾಹಿತ್ಯವಾಗಿದೆ ಎಂದು ಅಭಿಪ್ರಾಯಪಟ್ಟರು. ಇದರ ವಿರುದ್ಧವಾಗಿ ಕರ್ನಾಟಕದಾದ್ಯಂತ ಹೋರಾಟಗಳಾದವು. ಕೊನೆಗೆ ಬಸವಲಿಂಗಪ್ಪನವರು ಮಂತ್ರಿ ಪದವಿಗೆ ರಾಜೀನಾಮೆ ಸಲ್ಲಿಸಿದರು. ಈ ಪ್ರಕರಣ ಕ್ರಮೇಣ ದಲಿತ ಪ್ರಜ್ಞೆಯನ್ನು ತೀವ್ರವಾಗಿ ಬೆಳೆಸಲು ಕಾರಣವಾಯಿತು.

ಅನಂತರ 1976ರಲ್ಲಿ ಭದ್ರಾವತಿಯಲ್ಲಿ 'ದಲಿತ ಲೇಖಕ ಕಲಾವಿದರ ಒಕ್ಕೂಟ' ಸ್ಥಾಪನೆಯಾಯಿತು. ಕರ್ನಾಟಕದ ದಲಿತ ಚಳವಳಿಯ ಆರಂಭದ ಗಟ್ಟಿ ಹೆಜ್ಜೆಯನ್ನು ಈ ಒಕ್ಕೂಟದ ಪ್ರಾರಂಭದಲ್ಲಿ ಕಾಣಬಹುದು. ಮುಂದೆ ಇದರ ಆಶ್ರಯದಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಸ್ಥಾಪನೆಗೊಂಡಿತು. ಪ್ರೊ. ಬಿ. ಕೃಷ್ಣಪ್ಪ ಅದರ ರಾಜ್ಯ ಸಂಚಾಲಕರಾದರು. ಹೀಗೆ ಡಿ.ಎಸ್.ಎಸ್. ಒಂದು ಸಾಂಸ್ಥಿಕ ರೂಪ ಪಡೆಯಿತು.

ಕ್ರಮೇಣ ದಲಿತ ಸಂಘರ್ಷ ಸಮಿತಿಯು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು. ನೌಕರರು, ಮಹಿಳೆಯರು, ಪೌರಕಾರ್ಮಿಕರು, ವಿದ್ಯಾರ್ಥಿಗಳು ಮತ್ತು ಲೇಖಕರು ಹಾಗೂ ಕಲಾವಿದರ ಒಕ್ಕೂಟಗಳೆಂಬ ಅದರ ಶಾಖೆಗಳು ಆರಂಭಗೊಂಡವು. ಪಾರಂಪರಿಕವಾಗಿ ಭೂಮಿಯೇ ಇಲ್ಲದಿದ್ದ ದಲಿತರು ಭೂಮಿಯನ್ನು ಪಡೆಯುವ ಹೋರಾಟವನ್ನು ಆರಂಭಿಸಿದರು. ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವ ಮೂಲಕ ಅಧಿಕಾರದ ಕೇಂದ್ರಗಳಿಗೆ ಪ್ರವೇಶ ಪಡೆಯುವುದು ದಲಿತ ಚಳವಳಿಯ ಮತ್ತೊಂದು ಕಾರ್ಯಸೂಚಿಯಾಗಿತ್ತು. ಆದರೆ ಕಾಲಕ್ರಮೇಣ ದಲಿತ ಸಂಘರ್ಷ ಚಳವಳಿಯಲ್ಲಿ ಬಿರುಕುಗಳು ಕಾಣಿಸಲಾರಂಭಿಸಿದವು. ಬೇರೆ ಬೇರೆ ಹೆಸರುಗಳಲ್ಲಿ ಹೊಸ ಸಂಘಟನೆಗಳು ಹುಟ್ಟಿಕೊಂಡವು.



**ಚಟುವಟಿಕೆ:** ದೇವನೂರು ಮಹಾದೇವ ಮತ್ತು ಸಿದ್ಧಲಿಂಗಯ್ಯನವರ ಕೃತಿಗಳನ್ನು ಕುರಿತು ಹೆಚ್ಚಿನ ಮಾಹಿತಿ ಸಂಗ್ರಹಿಸಿರಿ.

ಸಾಹಿತಿಗಳಾದ ದೇವನೂರು ಮಹಾದೇವ ಮತ್ತು ಸಿದ್ಧಲಿಂಗಯ್ಯನವರು ಸಾಹಿತ್ಯದ ಮೂಲಕ ದಲಿತರ ಒಳಜಗತ್ತನ್ನು ದಲಿತೇತರರಿಗೆ ತೆರೆದುಕೊಟ್ಟರು. ಇತರ ದಲಿತ ಲೇಖಕರು ಈ ಸಮುದಾಯಗಳು ಜಾಗತೀಕರಣದ ಹಿನ್ನೆಲೆಯಲ್ಲಿ ಎದುರಿಸುತ್ತಿರುವ ಸವಾಲುಗಳನ್ನು ಅನಾವರಣ ಮಾಡುತ್ತಿದ್ದಾರೆ. ಇಂದು ದಲಿತರು ಸಮಾಜದ ಎಲ್ಲ ಆಗುಹೋಗುಗಳಲ್ಲಿ ನಿರ್ಣಾಯಕ ಪಾತ್ರವಹಿಸುವ ಸಾಮರ್ಥ್ಯವನ್ನು ತೋರುತ್ತಿದ್ದಾರೆ. ಆದರೆ ಸಾಗಬೇಕಾದ ದಾರಿ ಬಹಳಷ್ಟಿದೆ.

## 5. ಕನ್ನಡ ಉಳಿಸಿ ಚಳವಳಿ ಅಥವಾ ಕನ್ನಡ ಕಾವಲು ಚಳವಳಿ

ಏಕೀಕರಣ ಚಳವಳಿಯು ಕನ್ನಡಿಗರಲ್ಲಿ ಆತ್ಮವಿಶ್ವಾಸ ಮತ್ತು ಅನ್ಯೋನ್ಯತೆಯನ್ನು ತಂದಿತು. ಸಾಹಿತ್ಯ ಸೃಷ್ಟಿಯ ಮೂಲಕ ಕನ್ನಡದ ಲೇಖಕರು ಜನರ ಕನ್ನಡತನವನ್ನು ಜೀವಂತವಾಗಿ ಇಟ್ಟಿದ್ದರು. ಈ ನಿಟ್ಟಿನಲ್ಲಿ ಸಾಂಸ್ಕೃತಿಕ ಹಾಗೂ ಕನ್ನಡಪರ ಸಂಘಟನೆಗಳ ಪಾತ್ರ ಹಿರಿದಾಗಿದೆ. 1960ರ ದಶಕದ ನಂತರ ಬೆಂಗಳೂರಿನಲ್ಲಿ ಅನ್ಯಭಾಷಿಕರ ಅಬ್ಬರ ಹೆಚ್ಚಾದಾಗ ಅ.ನ.ಕೃ., ಚಿದಾನಂದಮೂರ್ತಿ, ಮ. ರಾಮಮೂರ್ತಿ, ವಾಟಾಳ್ ನಾಗರಾಜ್ ಮುಂತಾದವರು ಹಾಗೂ ಕರ್ನಾಟಕ ಯುವಜನ ಸಭಾ, ಕನ್ನಡ ಜಾಗೃತ ಪರಿಷತ್, ಕನ್ನಡ ಶಕ್ತಿಕೇಂದ್ರ ಮುಂತಾದ ಸಂಘಟನೆಗಳು ಕನ್ನಡ, ಕನ್ನಡಿಗ ಮತ್ತು ಕರ್ನಾಟಕದ ಮೇಲ್ಗೈಯನ್ನು ಸಾಧಿಸುವಲ್ಲಿ ಸಫಲರಾದರು. ಇವಲ್ಲದೆ ಇನ್ನೂ ಅನೇಕ ಕನ್ನಡಪರ ಸಂಘಟನೆಗಳು ಇಂದು ಕನ್ನಡ ನೆಲ, ಜಲ ಮತ್ತು ಭಾಷೆಯ ಸಂರಕ್ಷಣೆಯ ವಿಷಯದಲ್ಲಿ ಹೆಚ್ಚು ಕ್ರಿಯಾಶೀಲವಾಗಿವೆ.

## 6. ಗೋಕಾಕ್ ಚಳವಳಿ

ಒಂದರ್ಥದಲ್ಲಿ 1980ರ ದಶಕವು ಕನ್ನಡ ಭಾಷೆಯ ಅಸ್ತಿತ್ವಕ್ಕೆ ನಡೆದ ಹೋರಾಟದ ಕಾಲ. 1982ರಲ್ಲಿ ಗೋಕಾಕ್ ವರದಿಯ ಅನುಷ್ಠಾನಕ್ಕಾಗಿ ಒಂದು ನಿರ್ಣಾಯಕ ಚಾರಿತ್ರಿಕ ಹೋರಾಟ ಪ್ರಾರಂಭವಾಯಿತು. ಇಡೀ ಕನ್ನಡ ಸಮುದಾಯ ಅಭೂತಪೂರ್ವ ರೀತಿಯಲ್ಲಿ ಈ ಹೋರಾಟವನ್ನು ನಡೆಸಿತು. ಕರ್ನಾಟಕದಲ್ಲಿದ್ದ ಭಾಷಾ ಅಲ್ಪಸಂಖ್ಯಾತರು ಕನ್ನಡವನ್ನು ಕಡ್ಡಾಯವಾಗಿ ಕಲಿಯದೆ ಅವರ ಮಾತೃಭಾಷೆಯಲ್ಲೇ ಶಿಕ್ಷಣ ಪಡೆಯುತ್ತೇವೆಂಬ ಹಠಕ್ಕೆ ಬಿದ್ದರು. ಅಂದಿನ ಮುಖ್ಯಮಂತ್ರಿಗಳಾದ ಆರ್. ಗುಂಡೂರಾಯರು ಉಡುಪಿಗೆ ಹೋಗಿದ್ದ ಸಂದರ್ಭದಲ್ಲಿ ಅಲ್ಲಿಯ ಮಠಾಧಿಪತಿಗಳು ಸಂಸ್ಕೃತಕ್ಕೆ ಪ್ರಾಶಸ್ತ್ಯ ಕೊಡಬೇಕೆಂದು ಒತ್ತಾಯಿಸಿದರು. ಇದರ ಪರಿಣಾಮವಾಗಿ ಶಿಕ್ಷಣ ಯಾವ ಮಾಧ್ಯಮದಲ್ಲಿ ಇರಬೇಕು ಎನ್ನುವ ಪ್ರಶ್ನೆಯನ್ನು ಬಿಟ್ಟು ಶಿಕ್ಷಣದಲ್ಲಿ ಭಾಷೆಗಳ ಸ್ಥಾನಗಳು ಹೇಗಿರಬೇಕು ಎಂಬುದನ್ನು ನಿರ್ಧರಿಸಲು ಒಂದು ಸಮಿತಿ ರಚನೆಯಾಯಿತು. ಡಾ. ವಿನಾಯಕ ಕೃಷ್ಣ ಗೋಕಾಕರ ಅಧ್ಯಕ್ಷತೆಯಲ್ಲಿ ಭಾಷಾ ಸಮಿತಿ ರಚನೆಯಾಯಿತು. ಈ ಸಮಿತಿಯು ಕನ್ನಡ ಭಾಷೆಗೆ ಪ್ರಥಮ ಆದ್ಯತೆ ಮತ್ತು ಕಡ್ಡಾಯ ಮಾಡಬೇಕೆಂದು ಶಿಫಾರಸ್ಸು ಮಾಡಿತು. ಈ ಸಮಿತಿಯು ತ್ರಿಭಾಷಾ ಸೂತ್ರಕ್ಕೆ 350 ಅಂಕಗಳನ್ನು ನಿಗದಿಪಡಿಸಿತು. ತ್ರಿಭಾಷಾ ಪರೀಕ್ಷೆಯಲ್ಲಿ ಕನ್ನಡವು 150 ಅಂಕಗಳ ಪ್ರಥಮ ಭಾಷೆ ಆಗಿರಬೇಕು ಎಂದು ವರದಿಯಲ್ಲಿ ಶಿಫಾರಸ್ಸು ಮಾಡಿತು.

ಗೋಕಾಕ್ ವರದಿಯನ್ನು ಅಂದಿನ ಸರಕಾರ ಒಪ್ಪಲಿಲ್ಲ. ಡಾ. ರಾಜಕುಮಾರ್ ಅವರ ನೇತೃತ್ವದಲ್ಲಿ ಕರ್ನಾಟಕದಾದ್ಯಂತ ಬೃಹತ್ ಆಂದೋಲನ ನಡೆಯಿತು. ಕುವೆಂಪು, ಪಾಟೀಲ ಪುಟ್ಟಪ್ಪ ಮುಂತಾದ ಹಿರಿಯ ಸಾಹಿತಿಗಳು ಈ ಹೋರಾಟಕ್ಕೆ ಬೆಂಬಲವನ್ನು ನೀಡಿದರು.

ಗೋಕಾಕ್ ಚಳವಳಿಯ ಪ್ರಮುಖ ಘೋಷಣೆಗಳೆಂದರೆ "ಹೆಸರಾಯಿತು ಕರ್ನಾಟಕ, ಉಸಿರಾಗಲಿ ಕನ್ನಡ", "ಏನೇ ಬರಲಿ ಕನ್ನಡ ಇರಲಿ", "ಗೋಕಾಕ್ ವರದಿ ಜಾರಿಗೆ ಬರಲಿ", "ಕರ್ನಾಟಕದಲ್ಲಿ ಕನ್ನಡದ ಉಸಿರು ತುಂಬಲಿ", ಮುಂತಾದವು.



ವಿನಾಯಕ ಕೃಷ್ಣ ಗೋಕಾಕ್




ಡಾ|| ರಾಜ್ ಕುಮಾರ್

**ಚಟುವಟಿಕೆ :** ಗೋಕಾಕ್ ವರದಿಯ ಶಿಫಾರಸ್ಸುಗಳನ್ನು ಕುರಿತು ಹೆಚ್ಚಿನ ಮಾಹಿತಿ ಸಂಗ್ರಹಿಸಿರಿ.

## 7. ಪಂಚಾಯತ್ ರಾಜ್ ವ್ಯವಸ್ಥೆ

ಪಂಚಾಯತ್ ರಾಜ್ ವ್ಯವಸ್ಥೆಯನ್ನು ಆಡಳಿತದ ವಿಕೇಂದ್ರೀಕರಣ ವ್ಯವಸ್ಥೆ ಎಂದು ಸರಳ ಭಾಷೆಯಲ್ಲಿ ಹೇಳಬಹುದು. ಸ್ಥಳೀಯರಿಗೆ ಆಡಳಿತದಲ್ಲಿ ಭಾಗವಹಿಸುವ ಮತ್ತು ತೀರ್ಮಾನಗಳನ್ನು ತೆಗೆದುಕೊಳ್ಳುವ ಅಧಿಕಾರವನ್ನು ಕೊಡುವುದೇ ಈ ವ್ಯವಸ್ಥೆಯ ಕೇಂದ್ರ ಆಶಯ. ಭಾರತಕ್ಕೆ ಸ್ಥಳೀಯ ಸ್ವಯಂ ಆಡಳಿತ ವ್ಯವಸ್ಥೆಯ ಪರಿಚಯವಿದ್ದರೂ ಸ್ವಾತಂತ್ರ್ಯಾನಂತರ ಅದಕ್ಕೆ ಸಂವಿಧಾನಾತ್ಮಕ ರೂಪಕೊಡುವ ಕಾರ್ಯ ಚಾಲನೆಗೆ ಬಂದಿತು. ಕೇಂದ್ರ ಸರಕಾರವು 1955ರಲ್ಲಿ ಬಲವಂತರಾಯ್ ಮೆಹತಾ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು. ಸಮಿತಿಯು ಮೂರು ಹಂತದ ಸ್ಥಳೀಯ ಆಡಳಿತ ವ್ಯವಸ್ಥೆಯನ್ನು ಶಿಫಾರಸ್ಸು ಮಾಡಿತು.

ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ಅಂದಿನ ರಾಜ್ಯ ಸರಕಾರವು ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ಆಶಯಕ್ಕನುಗುಣವಾಗಿ 1959ರಲ್ಲಿ ಮೈಸೂರು ಗ್ರಾಮ ಪಂಚಾಯಿತಿಗಳ ಅಧಿನಿಯಮವನ್ನು ಜಾರಿಗೊಳಿಸಿತು. ತನ್ಮೂಲಕ ಕರ್ನಾಟಕದಲ್ಲಿ ಪ್ರಜಾಸತ್ತಾತ್ಮಕ ಸಂಸ್ಥೆಗಳಿಗೆ ಖಾಯಂ ನೆಲೆಯನ್ನು ಕಲ್ಪಿಸಿತು. ಹೊಸ ಕಾನೂನಿನ ಪ್ರಕಾರ ಆಡಳಿತ ವ್ಯವಸ್ಥೆಯ ಮೂರು ಹಂತಗಳು ಇವಾಗಿವೆ.

- ಗ್ರಾಮ ಪಂಚಾಯತ್
- ತಾಲ್ಲೂಕ್ ಪಂಚಾಯತ್
- ಜಿಲ್ಲಾ ಪಂಚಾಯತ್

ಕರ್ನಾಟಕದಲ್ಲಿ 1983ರಲ್ಲಿ ಅಸ್ತಿತ್ವಕ್ಕೆ ಬಂದ ಜನತಾ ಸರಕಾರ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತಂದಿತು. ಇದರ ರೂವಾರಿ ಅಂದಿನ ಪಂಚಾಯತ್ ರಾಜ್ ಖಾತೆ ಸಚಿವ ನಜೀರ್ ಸಾಬ್ ಅವರು. ದಲಿತ, ಹಿಂದುಳಿದ ಮತ್ತು ಮಹಿಳಾ ವರ್ಗಗಳಿಗೆ ಸ್ವಯಮಾಡಳಿತದಲ್ಲಿ ಪಾಲ್ಗೊಳ್ಳುವ ಹೆಚ್ಚಿನ ಅವಕಾಶವನ್ನು ಪಂಚಾಯತ್ ರಾಜ್ ವ್ಯವಸ್ಥೆ ಒದಗಿಸಿತು. ಈ ಹೊಸ ವ್ಯವಸ್ಥೆಯು ಕ್ರಮೇಣ ಕರ್ನಾಟಕದ ಸಾಮಾಜಿಕ ಮತ್ತು ರಾಜಕೀಯ ನಕ್ಷೆಯನ್ನೇ ಬದಲಿಸಿತು.


ನಜೀರ್ ಸಾಬ್

**ಚಟುವಟಿಕೆ :** ನಿಮ್ಮ ಊರಿನ ಗ್ರಾಮ ಪಂಚಾಯಿತಿಯ ರಚನೆ ಮತ್ತು ಕಾರ್ಯವ್ಯಾಪ್ತಿಯ ಬಗ್ಗೆ ಮಾಹಿತಿ ಸಂಗ್ರಹಿಸಿರಿ.



## ಅಭ್ಯಾಸಗಳು

**I ಒಂದು ಪದ ಅಥವಾ ವಾಕ್ಯದಲ್ಲಿ ಉತ್ತರಿಸಿರಿ.**

1. 'ತುಂಗಾ ಮೂಲವನ್ನು ಉಳಿಸಿ' ಆಂದೋಲನ ಏಕೆ ಆರಂಭವಾಯಿತು?
2. 'ಅಪ್ಪಿಕೊ' ಚಳವಳಿ ಎಂದರೇನು?
3. 'ಸಾಮಾಜಿಕ ಅರಣ್ಯ' ಎಂದರೇನು?
4. ಕರ್ನಾಟಕದ ಮೊದಲ ಮಹಿಳಾ ಬಿ.ಎ. ಆನರ್ಸ್ ಪದವೀಧರರು ಯಾರು?

**II ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

1. ನಾವೇಕೆ ಪ್ರಾಚೀನ ಕೆರೆಗಳನ್ನು ಉಳಿಸಬೇಕು?
2. ಪ್ರಮುಖ ಪರಿಸರ ಚಳವಳಿಗಳನ್ನು ಹೆಸರಿಸಿರಿ.
3. ದಲಿತ ಚಳವಳಿ ಏಕೆ ಪ್ರಾರಂಭವಾಯಿತು?
4. ದಲಿತ ಚಳವಳಿಯ ಬೀಜಮಂತ್ರಗಳು ಯಾವುವು?
5. ಪಂಚಾಯತ್ ರಾಜ್ ವ್ಯವಸ್ಥೆ ಏಕೆ ಮಹತ್ವದ್ದಾಗಿದೆ?

**III ಚರ್ಚಿಸಿರಿ.**

1. ನಿಮ್ಮ ಪ್ರದೇಶದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯಿಂದ ಆಗಿರುವ ಸಾಮಾಜಿಕ ಆರ್ಥಿಕ ಬದಲಾವಣೆಗಳು.

2. ದಲಿತ ಚಳವಳಿಗಳ ಸಾಧನೆಗಳು.

**ಚಟುವಟಿಕೆ:**

ಶಾಲೆಯಲ್ಲಿ ಗ್ರಾಮ ಪಂಚಾಯಿತಿಯ ಮಾದರಿ ಸಭೆಯನ್ನು ಏರ್ಪಡಿಸುವುದು. (ಶಿಕ್ಷಕರ ನೆರವನ್ನು ಪಡೆಯಿರಿ).



| ಪಾಠ 07 | ಕರ್ನಾಟಕದ ಆರ್ಥಿಕ ಮತ್ತು ಸಾಮಾಜಿಕ ಪರಿವರ್ತನೆ |
|---|---|




**ಪಾಠದ ಪರಿಚಯ**

ಈ ಪಾಠದಲ್ಲಿ ಕರ್ನಾಟಕದಲ್ಲಿ ಸ್ವಾತಂತ್ರ್ಯಾನಂತರದ ಕಾಲಘಟ್ಟದಲ್ಲಿ ಆದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಮೂಲ ಅಂಶಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

ಕೆಲವು ವರ್ಗಗಳು ಅಭಿವೃದ್ಧಿಯ ಸಿಂಹಪಾಲನ್ನು ಪಡೆದರೆ ಉಳಿದವು ವಿವಿಧ ಕಾರಣಗಳಿಗಾಗಿ ಅಭಿವೃದ್ಧಿಯಿಂದ ದೂರ ಉಳಿದಿವೆ. ಇದರ ಪರಿಣಾಮವೇ ಸಾಮಾಜಿಕ ಅಸಮತೋಲನ. ಇದನ್ನು ಹೋಗಲಾಡಿಸಲು ಸಂವಿಧಾನದ ಆಶಯಗಳ ಚೌಕಟ್ಟಿನಲ್ಲಿ ಸರ್ಕಾರವು ಭೂ ಸುಧಾರಣೆಗಳು, ಹಿಂದುಳಿದ ವರ್ಗಗಳ ಆಯೋಗಗಳ ನೇಮಕಾತಿ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

**ಸಾಮರ್ಥ್ಯಗಳು**

1] ಸ್ವಾತಂತ್ರ್ಯದ ನಂತರ ಕರ್ನಾಟಕದಲ್ಲಿ ಆಗಿರುವ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳ ಸಾಧನೆಯನ್ನು ತಿಳಿಯುವರು.

2] ಭೂ ಸುಧಾರಣೆ ಕಾಯಿದೆಯ ಉದ್ದೇಶ ಹಾಗೂ ಪರಿಣಾಮಗಳನ್ನು ಅರ್ಥೈಸಿಕೊಳ್ಳುವರು.

3] ಹಿಂದುಳಿದ ವರ್ಗಗಳ ಆಯೋಗಗಳು ನೀಡಿರುವ ಕೊಡುಗೆಗಳನ್ನು ಮೆಚ್ಚುವರು.



## 1 ಭೂ ಸುಧಾರಣೆ

ಭೂಮಿಯ ಹಿಡುವಳಿಗಳಲ್ಲಿ ಇರುವ ಸಮಸ್ಯೆಗಳನ್ನು ಹೋಗಲಾಡಿಸಲು ಜಾರಿಗೊಳಿಸಲಾಗಿರುವ ಕ್ರಮಗಳನ್ನು ಭೂ ಸುಧಾರಣೆ ಎನ್ನುವರು. ಭೂಮಿಯು ಮನುಷ್ಯನ ಬದುಕಿನ ಅವಿಭಾಜ್ಯ ಅಂಗ. ಅವನು ತನ್ನ ಬದುಕನ್ನು ರೂಪಿಸಿಕೊಳ್ಳಲು ಭೂಮಿಯನ್ನು ಅವಲಂಬಿಸಿದ್ದಾನೆ. ಆದರೆ ಭೂಮಿಯು ಎಲ್ಲಾ ಸಮುದಾಯಗಳಿಗೆ ಸಮಾನವಾಗಿ ಹಂಚಿಕೆಯಾಗಿಲ್ಲ. ಈ ಭೂ ಒಡೆತನದಲ್ಲಿರುವ ಅಸಮಾನತೆಯನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಭೂ ಸುಧಾರಣೆಯನ್ನು ಕೈಗೊಳ್ಳಲಾಯಿತು.

ಹಿಂದೆ ಭೂ ಮಾಲೀಕರ ಪರವಾದ ಕಾನೂನುಗಳು ಇದ್ದವೇ ವಿನಹ ಗೇಣಿದಾರನ ಪರವಾದ ಕಾನೂನುಗಳು ಇರಲಿಲ್ಲ. ಇದರಿಂದ ಸಂಪತ್ತಿನ ಕ್ರೋಢೀಕರಣ ಮತ್ತು ಹಂಚಿಕೆಯಲ್ಲಿ ಗಣನೀಯ ಅಸಮತೋಲನ ಏರ್ಪಟ್ಟಿತು. ಭೂ ಸುಧಾರಣೆಯ ಮೂಲಕ ಸಮ ಸಮಾಜವನ್ನು ರೂಪಿಸುವ ಪ್ರಯತ್ನವನ್ನು 1970ರ ದಶಕದಲ್ಲಿ ಕಾಣುತ್ತೇವೆ. ಕೂಲಿ ರೈತರ ಮತ್ತು ದಲಿತ ಚಳವಳಿಗಳ ಪರಿಣಾಮವಾಗಿ ಭೂ ಹಂಚಿಕೆಯ ಪ್ರಶ್ನೆಗಳು ಉದ್ಭವಿಸಿದವು. ಭೂ ಹೀನ ಕೆಳ ಸಮುದಾಯಗಳಿಗೆ ಭೂಮಿಯನ್ನು ನೀಡಬೇಕೆಂದು ಆಗ್ರಹಿಸಿ ಅನೇಕ ಹೋರಾಟಗಳು ನಡೆದವು. ಇದರ ಪರಿಣಾಮವಾಗಿ ಭೂ ಸುಧಾರಣೆಗಳು ಜಾರಿಯಾದವು. ಈ ಸುಧಾರಣೆಗಳ ಪ್ರಮುಖ ಅಂಶಗಳು ಇವಾಗಿವೆ.

## 1. ಜಮೀನ್ದಾರಿ ಪದ್ಧತಿಯ ನಿರ್ಮೂಲನ

ಭೂಮಿಯ ಮೇಲಿನ ಭೂ ಮಾಲೀಕ ವರ್ಗದ ಹಿಡಿತವನ್ನು ಮಿತಿಗೊಳಿಸುವುದು ಈ ಕ್ರಮದ ಉದ್ದೇಶವಾಗಿದೆ. 1955ರಲ್ಲಿ ಭಾರತದ ಮಾಜಿ ಉಪರಾಷ್ಟ್ರಪತಿ ಬಿ.ಡಿ. ಜತ್ತಿಯವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯು ಭೂ ಸುಧಾರಣೆಯನ್ನು ಕೈಗೊಳ್ಳುವ ಹಿನ್ನೆಲೆಯಲ್ಲಿ ಕೆಲವು ಶಿಫಾರಸ್ಸುಗಳನ್ನು ಮಾಡಿತು. ಈ ಸಮಿತಿಯು ಪ್ರತಿ ಕುಟುಂಬಕ್ಕೆ ಗರಿಷ್ಠ ಪ್ರಮಾಣ, ಅಂದರೆ 116 ಎಕರೆ ಒಣ ಭೂಮಿಯನ್ನು ಅಥವಾ 27 ಎಕರೆ ನೀರಾವರಿ ಭೂಮಿಯನ್ನು ಹೊಂದಬಹುದೆಂದು ಶಿಫಾರಸ್ಸು ಮಾಡಿತು. ಈ ಶಿಫಾರಸ್ಸುಗಳು ಉಳ್ಳವರ ಪರವಾಗಿದ್ದವು. 1957ರಲ್ಲಿ ಜಾರಿಗೊಂಡ ಈ ಶಿಫಾರಸ್ಸುಗಳು ಇದ್ದ ವ್ಯವಸ್ಥೆಯನ್ನು ನಿರ್ಣಾಯಕವಾಗಿ ಬದಲಾಯಿಸಲು ಸಾಧ್ಯವಾಗಲಿಲ್ಲ. 1974ರ ಭೂ ಸುಧಾರಣೆ ಕಾನೂನುಗಳು ಈ ಪದ್ಧತಿಯನ್ನು ಹೋಗಲಾಡಿಸುವಲ್ಲಿ ನಿರ್ಣಾಯಕವಾದವು.

ಒಂದು ಎಕರೆಗೆ 100 ಸೆಂಟ್ಸ್ ಅಥವಾ 40 ಗುಂಟೆ.

## 2. ಗೇಣಿ ಪದ್ಧತಿಯಲ್ಲಿ ಸುಧಾರಣೆ

ಭಾರತದ ಗೇಣಿದಾರರು ಅನೇಕ ಸಮಸ್ಯೆಯನ್ನು ಎದುರಿಸುತ್ತಿದ್ದರು. ಅವುಗಳೆಂದರೆ ಹೆಚ್ಚಿನ ಪ್ರಮಾಣದ ಗೇಣಿ, ಭೂಹಿಡುವಳಿಯಲ್ಲಿ ಅಭದ್ರತೆ ಮತ್ತು ಒಡೆತನವಿಲ್ಲದ ಭೂಹೀನ ಸ್ಥಿತಿ. ಈ ಸಮಸ್ಯೆಯನ್ನು ಹೋಗಲಾಡಿಸಲು 1974ರಲ್ಲಿ ಮುಖ್ಯಮಂತ್ರಿ ಡಿ. ದೇವರಾಜ ಅರಸ್ ಅವರು ಭೂ ಹಿಡುವಳಿ ಬಗ್ಗೆ ಕ್ರಾಂತಿಕಾರಕ ಕಾನೂನನ್ನು ಕರ್ನಾಟಕದಲ್ಲಿ ಜಾರಿಗೊಳಿಸಿದರು. ತಲೆಮಾರುಗಳಿಂದ ಗೇಣಿಯನ್ನು ಮಾಡುತ್ತಿದ್ದ ಅನೇಕ ಭೂಹೀನರು ನವಭೂಮಾಲೀಕರಾದರು.

### 1974ರ ಭೂ ಸುಧಾರಣಾ (ತಿದ್ದುಪಡಿ) ಕಾಯ್ದೆಯ ಪ್ರಮುಖ ಅಂಶಗಳು

1. ಅದು ಎಲ್ಲ ರೀತಿಯ ಗೇಣಿಯನ್ನು ರದ್ದುಗೊಳಿಸಿತು.
2. ರೈತನಿಗೆ ತಾನು ಉಳುಮೆ ಮಾಡುತ್ತಿದ್ದ ಭೂಮಿಯ ಮೇಲೆ ತನ್ನ ಹಕ್ಕನ್ನು ಸ್ಥಾಪಿಸಲು ಅವಕಾಶ ನೀಡಲಾಯಿತು.
3. ಗೇಣಿಯ ಎಲ್ಲ ಭೂಮಿಯು ಸರಕಾರದ ಸ್ವಾಧೀನಕ್ಕೆ ಸೇರಿತು. ಭೂಮಿಯ ಮೇಲೆ ಹಕ್ಕನ್ನು ಪಡೆಯಬಯಸುವವರು ಮತ್ತು ಪರಿಹಾರ ಪಡೆಯಬೇಕಾದವರು ನ್ಯಾಯಮಂಡಳಿಯ (ಟ್ರಿಬ್ಯೂನಲ್) ಮೂಲಕ ಅರ್ಜಿ ಹಾಕಬೇಕಿತ್ತು.
4. ನ್ಯಾಯಮಂಡಳಿಯ ನಿರ್ಧಾರ ಅಂತಿಮವಾಗಿತ್ತು. ಅದರ ನಿರ್ಧಾರವನ್ನು ಉಚ್ಚ ನ್ಯಾಯಾಲಯದಲ್ಲಿ ಮಾತ್ರ ಪ್ರಶ್ನಿಸಬಹುದಾಗಿತ್ತು.

### 3. ಗರಿಷ್ಠ ಹಿಡುವಳಿಯ ಮಿತಿ

1957ರ ನಂತರದಲ್ಲಿ ಆದ ಪ್ರಮುಖ ಪ್ರಯತ್ನಗಳು 1970ರ ದಶಕದಲ್ಲಿ ನಡೆದವು. ಒಂದು ಕುಟುಂಬ ಹೊಂದಬಹುದಾದ ಭೂಮಿಯ ಗರಿಷ್ಠ ಮಿತಿಯನ್ನು ಅಂದಿನ ರಾಜ್ಯ ಸರ್ಕಾರ ನಿಗದಿಪಡಿಸಿತು.

1974ರಲ್ಲಿ ಭೂಮಿಯ ಗರಿಷ್ಠ ಮಿತಿಯನ್ನು ಈ ಕೆಳಕಂಡಂತೆ ನಿಗದಿಪಡಿಸಲಾಯಿತು. ನೀರಿನ ಸೌಕರ್ಯವಿಲ್ಲದ ಖುಷ್ಕಿ ಭೂಮಿಯಾಗಿದ್ದರೆ ಅದರ ಮಿತಿ ಒಂದು ಕುಟುಂಬಕ್ಕೆ 54 ಎಕರೆಗಳಾಗಿರಬೇಕು. ನೀರಾವರಿ ಸೌಕರ್ಯವಿದ್ದು ಎರಡು ಅಥವಾ ಅದಕ್ಕಿಂತ ಹೆಚ್ಚು ಬೆಳೆಗಳನ್ನು ಬೆಳೆಯುತ್ತಿದ್ದರೆ ಪ್ರತಿ ಕುಟುಂಬಕ್ಕೆ 10ರಿಂದ 18ಎಕರೆಗಳು. ಒಂದು ಬೆಳೆ ತೆಗೆಯುವ ನೀರಾವರಿ ಭೂಮಿಯಾದರೆ ಒಂದು ಕುಟುಂಬಕ್ಕೆ ಗರಿಷ್ಠ 27 ಎಕರೆ ನಿಗದಿಪಡಿಸಲಾಗಿತ್ತು. ಜೊತೆಗೆ 1977ರಲ್ಲಿ ಇನಾಂ ರದ್ಧತಿ ಕಾಯ್ದೆ ಜಾರಿಗೆ ಬಂದಿತು.

ಇನಾಂ ರದ್ಧತಿ ಕಾಯ್ದೆಯ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಿರಿ.

### 4. ಆರ್ಥಿಕ ಹಿಡುವಳಿಗಳ ರಚನೆ

ಯಾವ ಹಿಡುವಳಿಯಿಂದ ಬೇಸಾಯಗಾರನು ಬೇಸಾಯ ವೆಚ್ಚಗಳನ್ನು ಕಳೆದು ತನಗೂ ತನ್ನ ಕುಟುಂಬಕ್ಕೂ ನೆಮ್ಮದಿಯಾಗಿರಲು ಬೇಕಾದ ಆದಾಯ ಗಳಿಸಬಲ್ಲನೋ ಅಂತಹ ಜೀವನಾಧಾರ ಹಿಡುವಳಿಯನ್ನು 'ಆರ್ಥಿಕ ಹಿಡುವಳಿ' ಎನ್ನುತ್ತಾರೆ. ಹಿಡುವಳಿಗಳ ಕ್ರೋಢೀಕರಣ ಮತ್ತು ಗರಿಷ್ಠ ಪ್ರಮಾಣದ ಮಿತಿಯಿಂದ ಅನೇಕ ಕೃಷಿಕರ ಜೀವನಮಟ್ಟ ಸುಧಾರಿಸಿತು.

### 5. ಸಹಕಾರಿ ಬೇಸಾಯ ಅಭಿವೃದ್ಧಿ

ರೈತರು ಸ್ವಯಂಪ್ರೇರಣೆಯಿಂದ ಸಹಕಾರಿ ಸಂಘಗಳನ್ನು ಸ್ಥಾಪಿಸಿಕೊಂಡು ತಮ್ಮ ಎಲ್ಲಾ ಹಿಡುವಳಿಯನ್ನು ಸಹರೈತರ ಉಸ್ತುವಾರಿಗೆ ಒಪ್ಪಿಸಿ ಒಟ್ಟಾಗಿ ಸೇರಿ ಸಾಗುವಳಿ ಮಾಡುತ್ತಾರೆ. ಉತ್ಪಾದನೆಯು ಕೈಗೆ ಬಂದಾಗ ಜಮೀನಿನ ಶಾಶ್ವತ ಅಭಿವೃದ್ಧಿಗೆ ಅಗತ್ಯ ಬಂಡವಾಳವನ್ನು ತೆಗೆದಿಟ್ಟು ಉಳಿದ ಭಾಗವನ್ನು ಹಂಚಿಕೊಳ್ಳುತ್ತಾರೆ. ಇದನ್ನು 'ಸಹಕಾರಿ ಬೇಸಾಯ ಪದ್ಧತಿ' ಎನ್ನುತ್ತೇವೆ.

ಭೂ ಸುಧಾರಣೆಯಿಂದ ಭೂ ಹೀನರಿಗೆ ಭೂಮಿಯ ಒಡೆತನದ ಹಕ್ಕು ಸಣ್ಣ ಪ್ರಮಾಣದಲ್ಲಿ ದೊರಕಿತು. ಸಾಗುವಳಿದಾರರ ಹಕ್ಕುಗಳನ್ನು ಕಾಪಾಡಲಾಯಿತು. ಸಹಕಾರಿ ಬೇಸಾಯ ಪದ್ಧತಿಯಿಂದ ರೈತರು ಸ್ವಲ್ಪಮಟ್ಟಿಗಿನ ಲಾಭವನ್ನು ಹೊಂದಲು ಸಾಧ್ಯವಾಯಿತು. ಆದರೆ ಸಹಕಾರಿ ಬೇಸಾಯ ಪದ್ಧತಿಯು ನಿರೀಕ್ಷಿತ ಪ್ರಮಾಣದಲ್ಲಿ ಜನರಿಗೆ ಒಪ್ಪಿತ ಬೇಸಾಯ ಪದ್ಧತಿಯಾಗಲಿಲ್ಲ.

## 2. ಹಿಂದುಳಿದ ವರ್ಗಗಳ ಆಯೋಗಗಳು

ಭಾರತದ ಸಾಮಾಜಿಕ ವ್ಯವಸ್ಥೆ ಅಸಮಾನತೆಯಿಂದ ಕೂಡಿದೆ. ಶ್ರೇಣೀಕೃತ ಜಾತಿ ವ್ಯವಸ್ಥೆಯಿಂದ ಅನೇಕ ಜಾತಿಗಳು ಹಿಂದುಳಿದವುಗಳಾಗಿಯೆ ಉಳಿದವು. ಬ್ರಿಟಿಷರು ಭಾರತಕ್ಕೆ ಬಂದ ನಂತರ ಹೊಸ ಸಾಮಾಜಿಕ ಚಲನಶೀಲತೆ ಪ್ರಾರಂಭವಾಯಿತು.

ಬ್ರಿಟಿಷರ ಆಡಳಿತದಡಿಯಲ್ಲಿ ಯಾವುದೇ ಜಾತಿ ವರ್ಗಗಳ ತಾರತಮ್ಯವಿಲ್ಲದೆ ಎಲ್ಲರೂ ಇಂಗ್ಲಿಷ್ ಭಾಷೆಯನ್ನು ಕಲಿಯಲು ಅರ್ಹರಾದರು. ಇಂಗ್ಲಿಷ್ ಭಾಷೆ ಕಲಿತವರಿಗೆ ಬ್ರಿಟಿಷ್ ಸರಕಾರದಲ್ಲಿ ಹೊಸ ಅವಕಾಶಗಳು ದೊರೆಯತೊಡಗಿದವು. ಬ್ರಾಹ್ಮಣೇತರರು ವಿದ್ಯಾಭ್ಯಾಸ ಕ್ಷೇತ್ರಕ್ಕೆ ತೆರೆದುಕೊಂಡ ನಂತರ ಅವರಲ್ಲಿ ಹೊಸ ಎಚ್ಚರ ಪ್ರಾರಂಭವಾಯಿತು. ಬಹುಸಂಖ್ಯಾತರಾಗಿದ್ದರೂ ತಮ್ಮ ವರ್ಗಗಳಿಗೆ ಸರಕಾರಿ ಉದ್ಯೋಗಗಳಲ್ಲಿ ಸೂಕ್ತ ಪ್ರಾತಿನಿಧ್ಯವಿರಲಿಲ್ಲ. ಇದರ ಪರಿಣಾಮವಾಗಿ ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣೇತರರು ಸಾಹುಕಾರ ಚೆನ್ನಯ್ಯ, ಎಂ. ಬಸವಯ್ಯ ಮುಂತಾದವರ ನೇತೃತ್ವದಲ್ಲಿ ಬ್ರಾಹ್ಮಣೇತರ ಚಳವಳಿಯನ್ನು ಹುಟ್ಟುಹಾಕಿದರು.

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಭಾರತದಲ್ಲೇ ಪ್ರಥಮವಾಗಿ ಹಿಂದುಳಿದ ವರ್ಗಗಳ ಆಯೋಗವು ನ್ಯಾಯಮೂರ್ತಿ ಲೆಸ್ಲೆ ಸಿ. ಮಿಲ್ಲರ್ ಅವರ ಅಧ್ಯಕ್ಷತೆಯಲ್ಲಿ 1918ರಲ್ಲಿ ನೇಮಕವಾಯಿತು. ಒಂದು ಜಾತಿಯಲ್ಲಿ ಶೇಕಡ ಐದು ಅಥವಾ ಅದಕ್ಕಿಂತ ಹೆಚ್ಚಿನವರು ಇಂಗ್ಲಿಷ್ ಬಲ್ಲವರಿದ್ದರೆ ಅಂತಹ ಜಾತಿಯನ್ನು ಮುಂದುವರೆದವರು ಎಂದು ಈ ಸಮಿತಿ ಅಭಿಪ್ರಾಯ ಪಟ್ಟಿತು. 1921ರಲ್ಲಿ ಮೈಸೂರು ರಾಜ್ಯದಲ್ಲಿ ಪ್ರಥಮ ಮೀಸಲಾತಿ ಆಜ್ಞೆ ಜಾರಿಗೆ ಬಂದಿತು.


ಎಲ್.ಜಿ. ಹಾವನೂರು

ಮುಖ್ಯಮಂತ್ರಿ ಡಿ. ದೇವರಾಜ್ ಅರಸ್‌ರವರು 1975 ರಲ್ಲಿ ಎಲ್.ಜಿ. ಹಾವನೂರು ಅವರ ನೇತೃತ್ವದಲ್ಲಿ ಪ್ರಥಮ ಹಿಂದುಳಿದ ವರ್ಗಗಳ ಆಯೋಗವನ್ನು ನೇಮಿಸಿದರು. 1975ನೇ ಇಸವಿಯ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿವಿಧ ಜಾತಿಯು ವಿದ್ಯಾರ್ಥಿಗಳ ಶೇಕಡಾವಾರನ್ನು ಜಾತಿಗಳ ಹಿಂದುಳಿದಿರುವಿಕೆಯನ್ನು ಗುರುತಿಸಲು ಮಾನದಂಡವನ್ನಾಗಿ ತೆಗೆದುಕೊಳ್ಳಲಾಯಿತು. ಹಾವನೂರು ವರದಿಯ ಆಧಾರದ ಮೇಲೆ 1977ರಲ್ಲಿ ಸರಕಾರಿ ಆಜ್ಞೆಯನ್ನು ಜಾರಿಗೆ ತರಲಾಯಿತು. ಇದು ಒಂದು ಕ್ರಾಂತಿಕಾರಕ ಆಜ್ಞೆಯಾಯಿತು. ಹಿಂದುಳಿದ ವರ್ಗಗಳು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಸಬಲರಾಗಲು ಈ ಆಜ್ಞೆ ಬಹುಮಟ್ಟಿಗೆ ಕಾರಣವಾಯಿತು. ಇದನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಈ ವರದಿಯಲ್ಲಿರುವ ನ್ಯೂನತೆಗಳನ್ನು ಸರಿಪಡಿಸಲಾಗುವುದು ಎನ್ನುವ ಭರವಸೆಯನ್ನು ಕರ್ನಾಟಕ ಸರ್ಕಾರವು ನ್ಯಾಯಾಲಯಕ್ಕೆ ನೀಡಿತು. ಇದರ ಪರಿಣಾಮವಾಗಿ 1983ರಲ್ಲಿ ಟಿ. ವೆಂಕಟಸ್ವಾಮಿ ಆಯೋಗದ ನೇಮಕವಾಯಿತು. ರಾಜಕೀಯ ಒತ್ತಡದ ಕಾರಣಗಳಿಗಾಗಿ

ವೆಂಕಟಸ್ವಾಮಿ ವರದಿಯನ್ನು ಸರ್ಕಾರ ಒಪ್ಪಲಿಲ್ಲ. ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಆಡಳಿತಾವಧಿಯಲ್ಲಿ ನ್ಯಾಯಮೂರ್ತಿ ಓ. ಚಿನ್ನಪ್ಪ ರೆಡ್ಡಿಯವರ ನೇತೃತ್ವದಲ್ಲಿ ಒಂದು ಸಮಿತಿಯ ರಚನೆಯಾಯಿತು. ಈ ವರದಿಯ ಶಿಫಾರಸ್ಸುಗಳು ಕೂಡ ರಾಜಕೀಯ ಒತ್ತಡಗಳಿಂದಾಗಿ ಜಾರಿಗೆ ಬರಲಿಲ್ಲ.

ಇಲ್ಲಿಯವರೆಗೂ ಜಾರಿಗೊಂಡ ಎಲ್ಲಾ ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದ ಮೀಸಲಾತಿ ಆಜ್ಞೆಗಳು ರಾಜೀಸೂತ್ರದ ಆಜ್ಞೆಗಳಾಗಿವೆಯೇ ಹೊರತು ಯಾವುದೇ ವೈಜ್ಞಾನಿಕ ವರದಿಯ ಶಿಫಾರಸ್ಸುಗಳ ಮೇಲೆ ರೂಪಿತವಾದ ಆಜ್ಞೆಗಳಾಗಿಲ್ಲ.

### ಹೊಸಪದ

ಗೇಣಿ : ಭೂ ಮಾಲೀಕ ಮತ್ತು ಗೇಣಿದಾರನ ನಡುವೆ ನಡೆಯುವ ಒಪ್ಪಂದದ ಫಲವಾಗಿ ಗೇಣಿದಾರನು ಒಟ್ಟು ಉತ್ಪಾದನೆಯಲ್ಲಿ ಪಡೆಯುವ ಪಾಲು.



## ಅಭ್ಯಾಸಗಳು

**I ಬಿಟ್ಟ ಜಾಗದಲ್ಲಿ ಸೂಕ್ತವಾದ ಪದವನ್ನು ತುಂಬಿರಿ.**

1. ಬಿ.ಡಿ.ಜತ್ತಿಯವರು ಭಾರತದ ____________ ಆಗಿದ್ದರು.
2. 1974ರಲ್ಲಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿದ್ದವರು ____________ .
3. 1975ರಲ್ಲಿ ನೇಮಕವಾದ ಪ್ರಥಮ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರು ____________ .

**II ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

1. ಭೂ ಸುಧಾರಣೆ ಎಂದರೇನು?
2. ಮುಖ್ಯವಾದ ಭೂ ಸುಧಾರಣೆಗಳು ಯಾವುವು?
3. ಆರ್ಥಿಕ ಹಿಡುವಳಿ ಎಂದರೇನು?
4. ಒಂದು ಕುಟುಂಬ ಹೊಂದಬಹುದಾದ ಭೂಮಿಯ ಗರಿಷ್ಠ ಮಿತಿಯನ್ನು ಕರ್ನಾಟಕ ಸರ್ಕಾರವು ಏಕೆ ನಿಗದಿ ಪಡಿಸಿದೆ?
5. ಸಹಕಾರಿ ಬೇಸಾಯ ಪದ್ಧತಿ ಎಂದರೇನು?
6. ಎಲ್.ಜಿ. ಹಾವನೂರು ಆಯೋಗವು ಹಿಂದುಳಿಯುವಿಕೆಯನ್ನು ಹೇಗೆ ಗುರುತಿಸಿತು?



ಪಾಠ 08

# ಮಹಿಳಾ ಸ್ವಾತಂತ್ರ್ಯ ಹೋರಾಟಗಾರರು




## ಪಾಠದ ಪರಿಚಯ

ಚಾರಿತ್ರಿಕವಾಗಿ ಮಹಿಳೆಯರನ್ನು ಕುಟುಂಬದ ಚೌಕಟ್ಟಿಗೆ ನಮ್ಮ ಪುರುಷ ಪ್ರಧಾನ ಸಮಾಜ ಸೀಮಿತಗೊಳಿಸಿತ್ತು. ಆಗಾಗ ಸಾರ್ವಜನಿಕ ಕ್ಷೇತ್ರಕ್ಕೆ ಪ್ರವೇಶಿಸಿ, ನಿರ್ಣಾಯಕ ಪಾತ್ರವನ್ನು ವಹಿಸಿದ ಮಹಿಳೆಯರು ವಿರಳವಾಗಿ ಕಾಣುತ್ತಾರೆ. ಉದಾಹರಣೆಗೆ ರಾಣಿ ಅಬ್ಬಕ್ಕದೇವಿ ಒಂದು ನಿದರ್ಶನವಾಗಿದ್ದಾರೆ. ಆಧುನಿಕ ಕಾಲ ಘಟ್ಟದಲ್ಲಿ ಪಶ್ಚಿಮದ ದೇಶಗಳಿಂದ ಬಂದ ಪರಿಕಲ್ಪನೆಗಳಾದ ಸಮಾನತೆ, ಸ್ವಾತಂತ್ರ್ಯ ಮತ್ತು ವಿಶ್ವಭ್ರಾತೃತ್ವಗಳು ಭಾರತೀಯ ಸಮಾಜಕ್ಕೆ ಭಾರತೀಯ ಇಂಗ್ಲಿಷ್ ವಿದ್ಯಾವಂತ ವರ್ಗದ ಮೂಲಕ ಪ್ರವೇಶ ಪಡೆದಿದ್ದಲ್ಲದೆ, ಹೊಸ ಸಾಮಾಜಿಕ ಪಲ್ಲಟಗಳಿಗೂ ಕಾರಣವಾದವು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧೀಜಿಯವರ ನೇತೃತ್ವದಲ್ಲಿ ಇಲ್ಲಿಯವರೆಗೂ ನೇಪಥ್ಯದಲ್ಲಿದ್ದ ಅನೇಕ ಸಾಮಾಜಿಕ ವರ್ಗಗಳು, ಸ್ವಾತಂತ್ರ್ಯ ಹೋರಾಟಕ್ಕೆ ವಿಶೇಷ ಶಕ್ತಿಯನ್ನು ತುಂಬಿದವು. ರೈತರು, ಕಾರ್ಮಿಕರು, ವಿದ್ಯಾರ್ಥಿಗಳು ಮತ್ತು ಮಹಿಳೆಯರು ಅತ್ಯಂತ ಕ್ರಿಯಾಶೀಲರಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡಿದ್ದಲ್ಲದೆ, ಸ್ವಾತಂತ್ರ್ಯದಲ್ಲಿ ತಮಗೂ ಪಾಲಿದೆ ಎಂಬುದನ್ನು ತೋರಿಸಿಕೊಟ್ಟರು. ಈ ಹಿನ್ನಲೆಯಲ್ಲಿ ಕರ್ನಾಟಕದ ಮಹಿಳೆಯರ ಪಾತ್ರವೂ ಅನನ್ಯವಾದದ್ದು. ತಮ್ಮ ಇಡೀ ಬದುಕನ್ನು ನಾಡಿನ ಸ್ವಾತಂತ್ರ್ಯ ಮತ್ತು ಏಳ್ಗೆಗಾಗಿ ಸವೆಸಿದರು. ಇದರಲ್ಲಿ ಕೆಲವರನ್ನು ಪ್ರಾತಿನಿಧಿಕವಾಗಿ ಅಭ್ಯಸಿಸುವುದರ ಮೂಲಕ ಮಹಿಳೆಯರು ಸ್ವಾತಂತ್ರ್ಯ ಹೋರಾಟದ ಚಾರಿತ್ರಿಕ ಕಾಲಘಟ್ಟದಲ್ಲಿ ನಿರ್ವಹಿಸಿದ ಪಾತ್ರವನ್ನು ಅರಿಯಬೇಕಾದದ್ದು ನಮ್ಮ ಕರ್ತವ್ಯ. ಇವರಲ್ಲಿ ಮಂಗಳೂರು ಬಳಿಯ ಉಳ್ಳಾಲದ ರಾಣಿ ಅಬ್ಬಕ್ಕದೇವಿ, ಕಮಲಾದೇವಿ ಚಟ್ಟೋಪಾಧ್ಯಾಯ, ಬಳ್ಳಾರಿ ಸಿದ್ದಮ್ಮ, ಉಮಾಬಾಯಿ ಕುಂದಾಪುರ, ಕೃಷ್ಣಬಾಯಿ ಪಣಬೇಕರ್, ಜಿ.ಆರ್. ಭಾಗೀರಥಮ್ಮ, ಸಿದ್ದಮ್ಮ ಜೋಯಿಸ್ ಮತ್ತು ಯಶೋಧರಮ್ಮ ದಾಸಪ್ಪ ಮುಂತಾದವರು ಮುಖ್ಯರು. ಇವರಲ್ಲದೆ ಇನ್ನೂ ಅನೇಕ ಮಹಿಳೆಯರು ಭಾಗವಹಿಸಿ ಅನಾಮಧೇಯರಾಗಿಯೆ ಉಳಿದುಕೊಂಡಿದ್ದಾರೆ.

## ಸಾಮರ್ಥ್ಯಗಳು

1] ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರು ನಿರ್ವಹಿಸಿದ ಪಾತ್ರವನ್ನು ಅರಿಯುವುದು.

2] ಗಾಂಧಿಪೂರ್ವ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರ ಬಗ್ಗೆ ತಿಳಿಯುವುದು.

3] ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ ಮಹಿಳೆಯರನ್ನು ಸ್ಮರಿಸುವುದು.

4] ಸ್ವಾತಂತ್ರ್ಯಾನಂತರ ಕರ್ನಾಟಕದ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಅರಿಯುವುದು.

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

- ರಾಣಿ ಅಬ್ಬಕ್ಕ ದೇವಿ,
- ಬಳ್ಳಾರಿ ಸಿದ್ದಮ್ಮ,
- ಕಮಲಾದೇವಿ ಚಟ್ಟೋಪಾಧ್ಯಾಯ,
- ಯಶೋಧರಮ್ಮ ದಾಸಪ್ಪ,
- ಉಮಾಬಾಯಿ ಕುಂದಾಪುರ.

## ರಾಣಿ ಅಬ್ಬಕ್ಕದೇವಿ


ರಾಣಿ ಅಬ್ಬಕ್ಕದೇವಿ

ಗಾಂಧಿ ಪೂರ್ವ ಸ್ವಾತಂತ್ರ್ಯ ಹೋರಾಟದಲ್ಲಿ ಕಿತ್ತೂರು ರಾಣಿ ಚೆನ್ನಮ್ಮ, ಕೆಳದಿ ಚೆನ್ನಮ್ಮರ ಸಾಲಿನಲ್ಲಿ ನಿಲ್ಲುವ ಮತ್ತೊಬ್ಬ ಮಹಿಳೆ "ರಾಣಿ ಅಬ್ಬಕ್ಕದೇವಿ". ಇವರು ಚೌಟ ಮನೆತನಕ್ಕೆ ಸೇರಿದ್ದರು. ಇವರ ಚಿಕ್ಕಪ್ಪನಾದ 'ತಿರುಮಲರಾಯರು' ಅಬ್ಬಕ್ಕದೇವಿಗೆ ಯುದ್ಧ ತಂತ್ರಕಲೆಗಳಲ್ಲಿ ತರಬೇತಿಗೊಳಿಸಿದ ನಂತರ ಉಳ್ಳಾಲದ ರಾಣಿಯನ್ನಾಗಿ ಅಧಿಕಾರಕ್ಕೆ ತಂದರು. ಅಬ್ಬಕ್ಕನು ಮಂಗಳೂರಿನ "ಭಂಗ" ಪ್ರಾಂತ್ಯದ ಲಕ್ಷ್ಮಪ್ಪ ಅರಸರನ್ನು ವಿವಾಹವಾದರು. ಆದರೆ ಇವರ ವೈವಾಹಿಕ ಜೀವನ ಬಹಳ ಕಾಲ ಉಳಿಯಲಿಲ್ಲ. ಹೀಗಾಗಿ ಉಳ್ಳಾಲಕ್ಕೆ ಹಿಂತಿರುಗಿದರು. ಪೋರ್ಚುಗೀಸರು ಅಬ್ಬಕ್ಕಳಿಗೆ ಕಪ್ಪ ನೀಡಲು ಒತ್ತಾಯಿಸಿದಾಗ ಇವರು ತಿರಸ್ಕರಿಸಿದರು. ಪರಿಣಾಮವಾಗಿ 1555ರಲ್ಲಿ ಪೋರ್ಚುಗೀಸರು "ರಾಣಿ" ಮೇಲೆ ಯುದ್ಧ ಸಾರಿದರು. ಈ ಯುದ್ಧದಲ್ಲಿ ಅಬ್ಬಕ್ಕ ಜಯವನ್ನು ಸಾಧಿಸಿದಳು. ನಂತರ 1568ರಲ್ಲಿ ಪೋರ್ಚುಗೀಸರು ವೈಸರಾಯ್ ಆದ "ಆಂಟೋನಿಯೋಮೋರಹ" ರವರ ನೇತೃತ್ವದಲ್ಲಿ ಉಳ್ಳಾಲವನ್ನು ಪ್ರವೇಶಿಸಿದರು. ರಾಣಿ ಅಲ್ಲಿಂದ ತಪ್ಪಿಸಿಕೊಂಡು 200 ಮಂದಿ ಸೈನಿಕರೊಂದಿಗೆ ಪೋರ್ಚುಗೀಸ್ ಸೈನ್ಯದ ಮೇಲೆ ಎರಗಿದಳು. ಜನರಲ್ 'ಪೆಕ್ಸೆಟೋ' ಈ ಯುದ್ಧದಲ್ಲಿ ಅಸುನೀಗಿದನು. ಪೋರ್ಚುಗೀಸ್ ಸೈನಿಕರನ್ನು ಸೆರೆ ಹಿಡಿಯಲಾಯಿತು. ಮುಂದುವರೆದ ಮತ್ತೊಂದು ಯುದ್ಧದಲ್ಲಿ ಪೋರ್ಚುಗೀಸರ ಅಡ್ಮಿರಲ್ 'ಮಾಸ್‌ಕಾರೆನ್ಸ್' ನು ಉಳ್ಳಾಲದ ಸೈನಿಕರಿಂದ ಹತನಾದನು. ರಾಣಿ ಅಬ್ಬಕ್ಕ ಪೋರ್ಚುಗೀಸರಿಗೆ ಮಂಗಳೂರು ಕೋಟೆಯನ್ನು ಬಿಟ್ಟು ಹೊರಡಬೇಕೆಂದು ಒತ್ತಾಯಿಸಿದಳು. ಆದರೆ ಪೋರ್ಚುಗೀಸರು ಪದೇ-ಪದೇ ಉಳ್ಳಾಲದ ಸಂಪತ್ತಿನಿಂದ ಆಕರ್ಷಿತರಾಗಿ ಯುದ್ಧ ಸಾರುತ್ತಲೇ ಇದ್ದರು. 1570 ರಲ್ಲಿ ಬಿಜಾಪುರದ ಸುಲ್ತಾನ ಮತ್ತು ಕಲ್ಲಿಕೋಟೆಯ ಜಾಮೋರಿನ್‌ರವರೊಂದಿಗೆ ಮೈತ್ರಿ ಒಪ್ಪಂದವನ್ನು ಅಬ್ಬಕ್ಕ ಮಾಡಿಕೊಂಡಳು. ಜಾಮೋರಿನ್ ದೊರೆಯ ದಂಡನಾಯಕನಾದ "ಕುಲ್ಪಿಪೂಕರ್ ಮಾರ್ಕಕರ್", ಅಬ್ಬಕ್ಕದೇವಿಯ ಪರವಾಗಿ ಯುದ್ಧ ಮಾಡಿ ಮಂಗಳೂರು ಕೋಟೆಯನ್ನು ವಶಪಡಿಸಿಕೊಂಡು ಹಿಂತಿರುಗಿ ಬರುವಾಗ ಪೋರ್ಚುಗೀಸರಿಂದ ಹತನಾದನು. ಅಬ್ಬಕ್ಕದೇವಿಯ ಪತಿಯಾದ ಲಕ್ಷ್ಮರಸನ ಸಹಕಾರದಿಂದ ಪೋರ್ಚುಗೀಸರು ಅಬ್ಬಕ್ಕದೇವಿಯನ್ನು ಯುದ್ಧದಲ್ಲಿ ಸೋಲಿಸಿ ಸೆರೆಮನೆಗೆ ತಳ್ಳಿದರು. ಅಬ್ಬಕ್ಕ ಸೆರೆಮನೆಯಲ್ಲಿಯೆ ತೀರಿಕೊಂಡಳು.

ರಾಣಿ ಅಬ್ಬಕ್ಕ ಸ್ಮರಣಾರ್ಥವಾಗಿ ಮಂಗಳೂರು ಬಳಿಯ ಉಳ್ಳಾಲದಲ್ಲಿ 'ವೀರರಾಣಿ ಅಬ್ಬಕ್ಕನ ಉತ್ಸವ' ಆಚರಿಸುತ್ತಾರೆ. ಸಾಹಸಿಗಳಾಗಿ ಸಾಧನೆ ಮಾಡಿದ ಮಹಿಳೆಯರಿಗೆ ವೀರರಾಣಿ ಅಬ್ಬಕ್ಕ ಪ್ರಶಸ್ತಿ ನೀಡುತ್ತಾರೆ. ಹಾಗೆಯೇ ದಿನಾಂಕ 15–1–2003 ರಲ್ಲಿ ರಾಣಿ ಅಬ್ಬಕ್ಕ ಅವರ ಭಾವಚಿತ್ರವಿರುವ ಅಂಚೆ ಕವರ್‌ನ್ನು ಭಾರತ ಅಂಚೆ ಇಲಾಖೆ ಹೊರತಂದಿದೆ.

## ಬಳ್ಳಾರಿ ಸಿದ್ಧಮ್ಮ (1903–1981)

ಇವರು ಇಂದಿನ ಹಾವೇರಿ ಜಿಲ್ಲೆಯ ದುಂಡಸೀ ಗ್ರಾಮದ ಸಂಪ್ರದಾಯಸ್ಥ ಕುಟುಂಬದಲ್ಲಿ 1903ರಲ್ಲಿ ಜನಿಸಿದರು. ತಂದೆ 'ಕೊಟ್ಟೆಗೆ ಬಸಟಪ್ಪ'. ಇವರು ವೃತ್ತಿಯಲ್ಲಿ ವ್ಯಾಪಾರಸ್ಥರಾದರೂ ಸ್ವಾತಂತ್ರ್ಯ ಚಳವಳಿಯ ಬಗೆಗೆ ಉತ್ಸಾಹವನ್ನು ಹೊಂದಿದ್ದರು. ತಂದೆ ಸಿದ್ಧಮ್ಮನವರಿಗೆ ಅಂದಿನ ದಿನಪತ್ರಿಕೆಗಳನ್ನು ಮತ್ತು ನಿಯತಕಾಲಿಕೆಗಳನ್ನು ತರಿಸಿಕೊಡುತ್ತಿದ್ದರಿಂದ ರಾಷ್ಟ್ರೀಯವಾದಿ ವಿಚಾರಧಾರೆಗಳನ್ನು ಓದಿ ತಿಳಿಯುತ್ತಿದ್ದರು. ಸ್ವಾತಂತ್ರ್ಯ ಹೋರಾಟಗಾರರಾದ ಬಳ್ಳಾರಿ ಮುರುಗಪ್ಪರವರನ್ನು ವಿವಾಹವಾಗಿದ್ದೂ ಕೂಡ ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಳ್ಳಲು ಕಾರಣವಾಯಿತು. 1930 ರ ದಶಕದಲ್ಲಿ ಹಳೆ ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟವು ತೀವ್ರಗತಿಯಲ್ಲಿ ನಡೆಯುತ್ತಿತ್ತು. ಆಗ ಎಸ್. ನಿಜಲಿಂಗಪ್ಪ, ಟಿ. ಸಿದ್ದಲಿಂಗಯ್ಯ, ಸರ್ದಾರ್ ವೀರಣ್ಣ ಗೌಡ ಮುಂತಾದ ಸ್ವಾತಂತ್ರ್ಯ ಹೋರಾಟಗಾರರು ಅಗ್ರಪಂಕ್ತಿಯಲ್ಲಿದ್ದರು. ಬಳ್ಳಾರಿ ಸಿದ್ಧಮ್ಮನವರು 1938 ರಲ್ಲಿ ನಡೆದ ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದ್ದರು. ದಿನಾಂಕ 13–04–1938 ರಂದು ಧ್ವಜಾರೋಹಣ ಮಾಡಿ ದಸ್ತಗಿರಿಯಾದರು. ಒಂದು ತಿಂಗಳ ಕಾಲ ಕಾರಾಗೃಹ ಶಿಕ್ಷೆಯನ್ನು ಅನುಭವಿಸಿದರು. ಸಂಸ್ಥಾನದಲ್ಲಿ ಧ್ವಜಾರೋಹಣ ಕಾರ್ಯಕ್ರಮ ನೆರವೇರಿಸಿದ ಪ್ರಥಮ ಮಹಿಳೆ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಸಂಸ್ಥಾನದ ಪತ್ರಿಕೆಗಳು ಸಿದ್ಧಮ್ಮನವರ ಸ್ವಾತಂತ್ರ್ಯ ಹೋರಾಟದ ಬಗೆಗಿನ ಬದ್ಧತೆಯನ್ನು ಮೆಚ್ಚಿ ಪ್ರಶಂಸಿದವು. ಕಾರಾಗೃಹದಿಂದ ಬಿಡುಗಡೆಯಾದ ನಂತರ ಸಿದ್ಧಮ್ಮನವರು ಪೂರ್ಣಪ್ರಮಾಣದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಮುಂದುವರೆದರು. ನಂತರ 1939 ರಲ್ಲಿ ಚಿತ್ರದುರ್ಗ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ದಾವಣಗೆರೆ ತಾಲ್ಲೂಕಿನ ಆನಗೋಡು ಮತ್ತು ಮಾಯಕೊಂಡ ಅರಣ್ಯ ಪ್ರದೇಶಗಳಲ್ಲಿ ಈಚಲು ಮರಗಳನ್ನು ಕಡಿಯುವ ಚಳವಳಿಯಲ್ಲಿ ಭಾಗವಹಿಸಿ ದಿನಾಂಕ 29–9–1939 ರಿಂದ 8–9–1940 ರವರೆಗೆ ಜೈಲು ಶಿಕ್ಷೆಯನ್ನು ಅನುಭವಿಸಿದರು. ನಂತರ 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದರು. ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಮೈಸೂರು ಸಂಸ್ಥಾನ ಭಾರತ ಒಕ್ಕೂಟಕ್ಕೆ ಸೇರಿಸುವ ತೀರ್ಮಾನ ಪ್ರಕಟಿಸದೆ ಇದ್ದುದ್ದರಿಂದ 1947ರಲ್ಲಿ ಅರಮನೆ ಸತ್ಯಾಗ್ರಹ ಅಥವಾ ಮೈಸೂರು ಚಲೋ ಸತ್ಯಾಗ್ರಹ ಪ್ರಾರಂಭವಾಯಿತು. ಈ ಚಳವಳಿಯಲ್ಲಿ ಬಳ್ಳಾರಿ ಸಿದ್ಧಮ್ಮ ಭಾಗವಹಿಸಿದ್ದರು. ಈ ಹೋರಾಟದ ನಂತರ ಮೈಸೂರು ರಾಜ್ಯವು ಭಾರತದ ಒಕ್ಕೂಟದಲ್ಲಿ ಸೇರ್ಪಡೆಯಾಯಿತು. ಇದರೊಂದಿಗೆ ಅಕ್ಟೋಬರ್ 1947 ರಲ್ಲಿ ಹೊಸಸರ್ಕಾರವು ಕೆ.ಸಿ.ರೆಡ್ಡಿ ಯವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದಿತು. ಸ್ವಾತಂತ್ರ್ಯ ನಂತರ ದಾವಣಗೆರೆ ತಾಲ್ಲೂಕಿನ ಶಾಸಕರಾಗಿ ಸೇವೆ ಸಲ್ಲಿಸಿದರು. ಗ್ರಾಮೀಣ ಬಡಮಹಿಳೆಯರ ಆರೋಗ್ಯವನ್ನು ಕಾಪಾಡಲು ಮಾತೃ ಮಂದಿರವನ್ನು ಸ್ಥಾಪಿಸಿ ಅವರಿಗೆ ಹೊಸ ಬೆಳಕಾದರು. ಇವರ ಈ ಸೇವಾ ಕಾರ್ಯಕ್ಕೆ ರಾಜ್ಯ ಸರ್ಕಾರ ತಾಮ್ರಪತ್ರವನ್ನು

ನೀಡಿ ಗೌರವಿಸಿದೆ. ಹೀಗೆ ಬಳ್ಳಾರಿ ಸಿದ್ದಮ್ಮನವರು ಮೈಸೂರಿನ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿ ಮಹಿಳೆಯರ ಗೌರವವನ್ನು ಹೆಚ್ಚಿಸಿದ್ದಾರೆ.

## ಕಮಲಾದೇವಿ ಚಟ್ಟೋಪಾಧ್ಯಾಯ (1903 – 1988)


ಕಮಲಾದೇವಿ ಚಟ್ಟೋಪಾಧ್ಯಾಯ

ಕಮಲಾದೇವಿ ಚಟ್ಟೋಪಾಧ್ಯಾಯ ಅವರು 1903 ಏಪ್ರಿಲ್ 3 ರಂದು ಮಂಗಳೂರಿನ ಶ್ರೀಮಂತ ಕುಟುಂಬ ಒಂದರಲ್ಲಿ ಜನಿಸಿದರು. ತಂದೆ ಧಾರೇಶ್ವರ ಅನಂತರಾಯರು, ತಾಯಿ ಗಿರಿಜಾಬಾಯಿ. ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆಯಲ್ಲಿ ಉನ್ನತ ಅಧಿಕಾರಿಯಾಗಿದ್ದರು. ಕಮಲಾದೇವಿಯವರು ಕ್ಯಾಥೋಲಿಕ್ ಕಾನ್ವೆಂಟ್ ಮತ್ತು ಸೇಂಟ್ ಮೇರಿಸ್ ಶಾಲೆಯಲ್ಲಿ ಶಿಕ್ಷಣವನ್ನು ಪಡೆದರು. ಇವರಿಗೆ 14ನೇ ವಯಸ್ಸಿನಲ್ಲಿ ವಿವಾಹವಾಯಿತು ಮತ್ತು ಸ್ವಲ್ಪ ಕಾಲದಲ್ಲೇ ವಿಧವೆಯಾದರು. ನೌಕರಿಯಲ್ಲಿದ್ದ ತಂದೆಯವರಿಗೆ ಮದ್ರಾಸಿಗೆ ವರ್ಗವಾದಾಗ ಮದ್ರಾಸಿನಲ್ಲಿ ಶಿಕ್ಷಣವನ್ನು ಮುಂದುವರೆಸಿದರು. ಮುಂದೆ ಇಂಗ್ಲಿಷರ ಪ್ರಸಿದ್ಧ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ನಲ್ಲಿ ಪದವಿಯನ್ನು ಪಡೆದು ಭಾರತಕ್ಕೆ ಹಿಂದಿರುಗಿ ಸಮಾಜ ಸುಧಾರಣೆಯಲ್ಲಿ ತೊಡಗಿದರು. ಈ ಸಂದರ್ಭದಲ್ಲೆ ಕವಿ, ಸಾಹಿತಿ, ರಂಗಕರ್ಮಿಯಾದ ಹರೀಂದ್ರನಾಥ ಚಟ್ಟೋಪಾಧ್ಯಾಯರ ಪರಿಚಯವಾಯಿತು. ನಂತರ ಅವರೊಂದಿಗೆ ಮರುವಿವಾಹವಾಗಿ ಕಮಲಾದೇವಿ ಚಟ್ಟೋಪಾಧ್ಯಾಯರಾದರು.

ಕಮಲಾದೇವಿಯವರು ರಾಷ್ಟ್ರರಾಜಕಾರಣದಲ್ಲಿ ಗುರುತಿಸಿಕೊಂಡ ಕರ್ನಾಟಕದ ಬಹುಮುಖ ಪ್ರತಿಭೆಯ ಮಹಿಳೆ. ಇವರು ಗಾಂಧೀಜಿ ಮತ್ತು ಸರೋಜಿನಿ ನಾಯ್ಡುರವರಿಂದ ಪ್ರಭಾವಿತರಾಗಿ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿದರು. ಕರ್ನಾಟಕದಾದ್ಯಂತ ಸಂಚರಿಸಿ ಯುವಜನತೆಯನ್ನು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಪ್ರೇರೇಪಿಸಿದರು. 1929 ರಲ್ಲಿ ಅಲಹಾಬಾದ್ ನಗರದಲ್ಲಿ ರಾಷ್ಟ್ರ ಧ್ವಜವನ್ನು ಹಿಡಿದು ಘೋಷಣೆಗಳನ್ನು ಕೂಗುತ್ತಾ ಮೆರವಣಿಗೆ ಹೊರಟು ಬ್ರಿಟಿಷ್ ದಬ್ಬಾಳಿಕೆಯನ್ನು ಖಂಡಿಸಿದರು. ಲಾಹೋರ್ ಕಾಂಗ್ರೆಸ್ ಅಧಿವೇಶನದ ನಿರ್ಣಯದಂತೆ ಗಾಂಧೀಜಿಯವರು 12 ಮಾರ್ಚ್ 1930 ರಂದು ತಮ್ಮ 78 ಅನುಯಾಯಿಗಳೊಂದಿಗೆ ಸಬರಮತಿ ಆಶ್ರಮದಿಂದ ಉಪ್ಪಿನ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಮೇ 5 ರಂದು ದಂಡಿಯನ್ನು ತಲುಪಿ ಮೇ 6 ರಂದು ಉಪ್ಪನ್ನು ತಯಾರಿಸುವುದರ ಮೂಲಕ ಬ್ರಿಟಿಷರ ಉಪ್ಪಿನ ಕಾನೂನುಗಳನ್ನು ವಿರೋಧಿಸಿದರು. ಈ ಸಂದರ್ಭದಲ್ಲಿ ದೇಶದ ಜನತೆ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಲು ಕರೆ ನೀಡಿದರು. ಕಮಲಾದೇವಿಯವರು ಗಾಂಧೀಜಿಯವರನ್ನು ಭೇಟಿಮಾಡಿ ಮಹಿಳೆಯರು ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಲು ಅನುಮತಿಯನ್ನು ಪಡೆದರು. ಕಮಲಾದೇವಿ ಮತ್ತು ಅವಂತೀಬಾಯಿ ಗೋಖಲೆಯವರು ಮೊದಲ ತಂಡದ ಮಹಿಳೆಯರಾಗಿ ಉಪ್ಪಿನ ಕಾನೂನು ಭಂಗ ಚಳವಳಿಯಲ್ಲಿ ಭಾಗವಹಿಸಿದರು.

"ಗಾಂಧೀ ಉಪ್ಪನ್ನು ಕೊಳ್ಳಿ ಇದರ ಬೆಲೆ ಆರು ತಿಂಗಳ ಶಿಕ್ಷೆ" ಎಂದು ಹೇಳುತ್ತಾ ಉಪ್ಪನ್ನು ಮಾರಾಟಮಾಡಿ ದಸ್ತಗಿರಿಯಾಗಿ ಯರವಾಡ ಜೈಲಿನಲ್ಲಿ ಶಿಕ್ಷೆಯನ್ನು ಅನುಭವಿಸಿದರು. ಶಿಕ್ಷೆಯನ್ನು ಅನುಭವಿಸಿ ಜೈಲಿನಿಂದ ಬಿಡುಗಡೆ ಹೊಂದಿದ ನಂತರವು ಸಹ ಬಾಂಬೆಯ ಗಬಾಕಾಪುರದಲ್ಲಿ ಸ್ವದೇಶಿ ವಸ್ತುಗಳನ್ನು ಮಾರಾಟ ಮಾಡಿದರು. ರಾಷ್ಟ್ರ ಮಟ್ಟದಲ್ಲಿ ಕಾಂಗ್ರೆಸಿನ ಸೇವಾದಳದ ಮಹಿಳೆಯರ ತಂಡದ ಜವಾಬ್ದಾರಿಯನ್ನು ವಹಿಸಿಕೊಂಡು ದೇಶಾದ್ಯಂತ ಸಂಚರಿಸಿ ಮಹಿಳಾ ಸ್ವಯಂಸೇವಕರನ್ನು ಸಂಘಟಿಸಿದರು. ಬಾಂಬೆ ಮತ್ತು ಬೋರೀವಿಗಳಲ್ಲಿ ಮಹಿಳಾ ಸ್ವಯಂಸೇವಕ ತರಬೇತಿಯ ಶಿಬಿರಗಳನ್ನು ತೆರೆಯಲಾಯಿತು. ಸೇವಾದಳದ ಈ ಸಂಘಟಿತ ಚಟುವಟಿಕೆಗಳಿಂದಾಗಿ ಬ್ರಿಟಿಷ್ ಸರ್ಕಾರ ಸೇವಾದಳವನ್ನು ರದ್ದುಮಾಡಿ ಕಮಲಾದೇವಿಯವರನ್ನು ದಸ್ತಗಿರಿಮಾಡಿ ಆರ್ಥರ್ ರಸ್ತೆ ಜೈಲಿನಲ್ಲಿರಿಸಿತು. ಇಲ್ಲಿ ಮೀರಾಬೆಹನ್ ರವರ ಪರಿಚಯವಾಯಿತು. ನಂತರ ವೇಲೂರು ಜೈಲಿಗೆ ವರ್ಗಾಯಿಸಲಾಯಿತು.

ಕಾಂಗ್ರೆಸ್ ಪಕ್ಷದಲ್ಲಿ ಅನೇಕ ಒಳಬಣಗಳಿದ್ದವು. ಸೈದ್ಧಾಂತಿಕವಾಗಿ ಸಮಾಜವಾದದಿಂದ ಪ್ರಭಾವಗೊಂಡ ನೆಹರು, ರಾಮ ಮನೋಹರ್ ಲೋಹಿಯ, ಆಚಾರ್ಯ ನರೇಂದ್ರದೇವ ಮುಂತಾದವರು ಕಾಂಗ್ರೆಸ್ ಪಕ್ಷದಲ್ಲೆ 'ಕಾಂಗ್ರೆಸ್ ಸೋಶಿಯಲಿಸ್ಟ್ ಪಕ್ಷ' ಎಂಬ ಒಳಬಣವೊಂದನ್ನು ಸ್ಥಾಪಿಸಿದರು. ಕಮಲಾದೇವಿ ಚಟ್ಟೋಪಾಧ್ಯಾಯರು 1934 ರಲ್ಲಿ ಈ ಪಕ್ಷದ ಸದಸ್ಯತ್ವವನ್ನು ಪಡೆದರು. ಸಮಾಜವಾದ ತತ್ವಗಳ ಪ್ರಚಾರಕ್ಕಾಗಿ ಕರ್ನಾಟಕಕ್ಕೆ ಬಂದು ಸಾರ್ವಜನಿಕ ಉಪನ್ಯಾಸಗಳನ್ನು ನೀಡಿ ಜನರಲ್ಲಿ ಜಾಗೃತಿಯನ್ನು ಮೂಡಿಸಿದರು. ಇದರಿಂದ ಅನೇಕ ತೊಂದರೆಗಳಿಗೂ ಒಳಗಾದರು. ಕಮಲಾದೇವಿಯವರು ಸ್ವಾತಂತ್ರ್ಯ ಹೋರಾಟಗಾರರಷ್ಟೇ ಅಲ್ಲದೇ ಸಮಾಜ ಸುಧಾರಕರು, ಸ್ತ್ರೀವಾದಿ ಚಿಂತಕರು, ಸಾಹಿತಿ ಮತ್ತು ಚಲನಚಿತ್ರ ನಟರೂ ಆಗಿದ್ದರು. ಇವರು ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಸೇವೆಗಾಗಿ 1955ರಲ್ಲಿ ಪದ್ಮಭೂಷಣ, 1962 ರಲ್ಲಿ ವತ್‌ಮುಲ್ ಫೌಂಡೇಶನ್ ಪ್ರಶಸ್ತಿ, 1966 ರಲ್ಲಿ ರಾಮನ್ ಮ್ಯಾಗಸೇ ಇಂಟರ್ ನ್ಯಾಷನಲ್ ಪ್ರಶಸ್ತಿ, ಶಾಂತಿಭಾರತ ದೆಸೆಟೀಕೊತ್ತಂ ಪ್ರಶಸ್ತಿ, ಸೆಂಟ್ರಲ್ ಅಕಾಡೆಮಿ ಪ್ರಶಸ್ತಿ ಮತ್ತು 1987 ರಲ್ಲಿ ಪದ್ಮವಿಭೂಷಣ ಪ್ರಶಸ್ತಿ ಗೌರವ ಲಭಿಸಿವೆ. ಇಂತಹ ಬಹುಮುಖ ಪ್ರತಿಭೆಯವರಾಗಿದ್ದ ಕಮಲಾದೇವಿ ಚಟ್ಟೋಪಾಧ್ಯಾಯರವರು ಕರ್ನಾಟಕದ ಹೆಮ್ಮೆ. ಇವರು 1988 ರಲ್ಲಿ ತೀರಿಕೊಂಡರು.



### ಯಶೋಧರಮ್ಮ ದಾಸಪ್ಪ (1905 – 1980)

ಯಶೋಧರಮ್ಮನವರು ದಿನಾಂಕ 28–5–1905ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ತಂದೆ ರಾಮಯ್ಯ, ತಾಯಿ ರೇವಮ್ಮ. ತಂದೆಯವರು ಸುಧಾರಣಾ ಮನೋಭಾವ ವ್ಯಕ್ತಿತ್ವದವರಾಗಿದ್ದರು. ಬೆಂಗಳೂರಿನಲ್ಲಿ ಆರಂಭಿಕ ಶಿಕ್ಷಣವನ್ನು ಮುಗಿಸಿ ನಂತರ ಮದ್ರಾಸ್‌ನ ಕ್ವೀನ್ ಮೇರಿ ಕಾಲೇಜಿಗೆ ಪ್ರವೇಶ ಪಡೆದು ಇಂಟರ್ ಮೀಡಿಯೇಟ್ ಶಿಕ್ಷಣ ಮುಗಿಸಿದರು. ಬೆಂಗಳೂರಿಗೆ ವಾಪಸ್ಸಾದ ನಂತರ ರಾವ್ ಸಾಹೇಬ್ ಚೆನ್ನಯ್ಯನವರ ಮೂರನೇ ಪುತ್ರ ದಾಸಪ್ಪನವರೊಂದಿಗೆ 1926ರಲ್ಲಿ ವಿವಾಹವಾಗಿ ವೈವಾಹಿಕ ಜೀವನಕ್ಕೆ ಕಾಲಿಟ್ಟರು. ದಾಸಪ್ಪ ಮತ್ತು ಯಶೋಧರಮ್ಮ ದಾಸಪ್ಪ

ಅವರು ಸಮಾಜ ಸೇವಕರು. ಗಾಂಧೀಜಿಯವರ ಪ್ರಭಾವಕ್ಕೊಳಗಾಗಿ ರಾಷ್ಟ್ರೀಯ ಕಾಂಗ್ರೆಸ್‌ನ ಸಕ್ರಿಯ ಕಾರ್ಯಕರ್ತರಾದರು. ವಾರ್ದಸೇವಾಗ್ರಾಮದಲ್ಲಿ ಕೆಲಕಾಲ ಸೇವೆಸಲ್ಲಿಸಿ ದಂಪತಿಗಳಿಬ್ಬರು ವಾಪಸ್ಸಾದರು. ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿಯಲ್ಲಿ ನಿರಂತರವಾಗಿ ತೊಡಗಿಸಿಕೊಂಡು ಸ್ವಾತಂತ್ರ್ಯ ನಂತರ ಮೈಸೂರು ಭಾರತ ಒಕ್ಕೂಟಕ್ಕೆ ಸೇರಿದ್ದಕ್ಕೆ ಸಾಕ್ಷಿಪ್ರಜ್ಞೆಯಾದರು.

ಮೈಸೂರು ನ್ಯಾಯವಿಧೇಯಕ ಸಭೆಗೆ ನಡೆದ ಚುನಾವಣೆಯಲ್ಲಿ ತಮ್ಮ ಪತಿ ಎಚ್. ಸಿ. ದಾಸಪ್ಪನವರು ಪ್ರಜಾ ಸಂಯುಕ್ತ ಪಕ್ಷದ ಅಭ್ಯರ್ಥಿಯಾದರೂ ಯಶೋಧರಮ್ಮರವರು ಕಾಂಗ್ರೆಸ್‌ನ ಸದಸ್ಯರಾಗಿ ಉಳಿದರು. ಸಮಾಜ ಸೇವಕಿಯಾಗಿ ತೊಡಗಿಸಿಕೊಂಡ ಯಶೋಧರಮ್ಮರವರು ಸ್ವಾತಂತ್ರ್ಯ ಹೋರಾಟದ ಭಾಗವಾಗಿದ್ದ 1938 ರ ಶಿವಪುರ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿದರು. 1942 ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಯಶೋಧರಮ್ಮ ದಾಸಪ್ಪರವರ ಮನೆ ಸ್ವಾತಂತ್ರ್ಯ ಹೋರಾಟಕ್ಕೆ ಪೂರಕವಾದ ಭೂಗತ ಚಟುವಟಿಕೆಗಳ ಕೇಂದ್ರವಾಗಿತ್ತು. ಚಳವಳಿ ಕುರಿತ ಲೇಖನಗಳನ್ನು ಗುಟ್ಟಾಗಿ ಮುದ್ರಿಸಿ 'ಜ್ವಾಲೆ' ಪತ್ರಿಕೆಯಲ್ಲಿ ಪ್ರಕಟಿಸಿದರು.

ಮೈಸೂರು ಸಂಸ್ಥಾನದಲ್ಲಿ ಪ್ರಜಾ ಸರ್ಕಾರ ಸ್ಥಾಪನೆಗಾಗಿ 1947ರಲ್ಲಿ ನಡೆದ ಮೈಸೂರು ಚಲೋ ಚಳವಳಿಯಲ್ಲಿ ಯಶೋಧರಮ್ಮ ದಾಸಪ್ಪನವರು ಜನರನ್ನು ಸಂಘಟಿಸುವಲ್ಲಿ ನೆರವಾದರು. ಮೈಸೂರು ಅರಮನೆಯ ಮುಂದೆ ಹರತಾಳ, ಮುಷ್ಕರಗಳು ನಡೆದವು. ಈ ಚಳವಳಿಯ ತೀವ್ರತೆಯನ್ನು ಮನಗಂಡ ಮಹಾರಾಜರು ಅಧಿಕಾರವನ್ನು ಜನತೆಗೆ ಹಸ್ತಾಂತರಿಸಿದರು. ಸ್ವಾತಂತ್ರ್ಯ ಸಂಸ್ಥಾನದಲ್ಲಿ ಶಾಸಕರಾಗಿ, ಲೋಕಸಭಾ ಸದಸ್ಯರಾಗಿ, ಎಸ್. ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಸಮಾಜಕಲ್ಯಾಣ ಸಚಿವರಾಗಿ ಅನುಪಮ ಸೇವೆ ಸಲ್ಲಿಸಿದ ಈ ಬಹುಮುಖ ಪ್ರತಿಭೆ ವ್ಯಕ್ತಿತ್ವದ ಯಶೋಧರಮ್ಮ ದಾಸಪ್ಪನವರು ಕ್ಯಾನ್ಸರ್ ಕಾಯಿಲೆಯಿಂದ 1980 ರಲ್ಲಿ ತೀರಿಕೊಂಡರು.

### ಉಮಾಬಾಯಿ ಕುಂದಾಪುರ (1892 – 1992)


ಉಮಾಬಾಯಿ ಕುಂದಾಪುರ

ಉಮಾಬಾಯಿ ಕುಂದಾಪುರರವರು ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದಲ್ಲಿ 1892 ರಲ್ಲಿ ಜನಿಸಿದರು. ತಂದೆ ಗೊಲಿಕೆರೆ ಕೃಷ್ಣರಾಯ, ತಾಯಿ ತುಂಗಾಬಾಯಿ. ತಮ್ಮ 13ನೇ ವಯಸ್ಸಿನಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಗುರುತಿಸಿಕೊಂಡಿದ್ದ ಸಂಜೀವ್ ರಾವ್ ರವರನ್ನು ವಿವಾಹವಾದರು. ಪತಿಯ ಪ್ರೋತ್ಸಾಹದಿಂದ 1921 ರ ನಂತರ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು. ಖಾದಿ ದಾರಿಗಳಾಗಿ ಕಾಂಗ್ರೆಸ್ ಚಟುವಟಿಕೆಗಳ ಪ್ರಭಾರ ಕಾರ್ಯವನ್ನು ಕೈಗೊಂಡರು. ದುರದೃಷ್ಟವಶಾತ್ 1923ರಲ್ಲಿ ಪತಿಯನ್ನು ಕಳೆದುಕೊಂಡ ನಂತರ ಹುಬ್ಬಳ್ಳಿಯಲ್ಲಿ ನೆಲೆಸಿದರು.

ಇವರು ತಿಲಕ್ ಗಾಂಧೀ ಮತ್ತು ಹರ್ಡೇಕರ್ ರವರ ರಾಷ್ಟ್ರೀಯತೆಯ ಆಲೋಚನೆಗಳಿಂದ ಪ್ರಭಾವಿತರಾಗಿ ಮರಾಠಿ ಭಾಷೆಯಲ್ಲಿ 'ಸ್ವದೇಶಿ ವ್ರತ' ಎಂಬ ನಾಟಕವನ್ನು ರಚಿಸಿ ಸ್ವದೇಶಿ ತತ್ವದ ಮಹತ್ವವನ್ನು ಸಾರಿದರು. ಮುಂಬೈಯಲ್ಲಿ ಸಾರಸ್ವತ ಸಾಹಿತ್ಯಿಕ ಸಮಾಜ ಮತ್ತು ಭಗಿನೀ ಮಂಡಳಿ ಹಾಗೂ ತಿಲಕ್ ಶಾಲೆಯ ಜವಾಬ್ದಾರಿಯನ್ನು ವಹಿಸಿಕೊಂಡರು. ಇವು ಸ್ತ್ರೀಯರಲ್ಲಿ ಸ್ವದೇಶಿ, ಖಾದಿ ಪ್ರಚಾರ, ರಾಷ್ಟ್ರೀಯ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸಿದವು. ತಿಲಕರ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರು ಗಾಂಧೀಜಿಯವರ ನೇತೃತ್ವದ ಹೋರಾಟದಲ್ಲೂ ಭಾಗವಹಿಸಿದ್ದರು. 1923ರಲ್ಲಿ ಎನ್. ಎಸ್. ಹರ್ಡೇಕರ್ ರವರು ಸ್ಥಾಪಿಸಿದ ಸೇವಾದಳದ ಮಹಿಳಾ ಗುಂಪಿನ ನಾಯಕತ್ವವನ್ನು ವಹಿಸಿಕೊಂಡು 1924 ರ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರಮುಖ ಪಾತ್ರವಹಿಸಿದರು. ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಇದರಿಂದ ನಾಲ್ಕು ತಿಂಗಳ ಕಾಲ ಹಿಂಡಲಗ ಮತ್ತು ಯರವಾಡ ಜೈಲುಗಳಲ್ಲಿ ಬಂಧನದಲ್ಲಿದ್ದರು. ಜೈಲಿನಿಂದ ಬಿಡುಗಡೆ ಹೊಂದಿದ ನಂತರ ಅಂಕೋಲ, ಶಿರಸಿ, ಸಿದ್ದಾಪುರ ಮುಂತಾದ ಕಡೆ ನಡೆದ ಸತ್ಯಾಗ್ರಹಗಳಲ್ಲಿ ಭಾಗವಹಿಸಿ ಶಿಕ್ಷೆ ಅನುಭವಿಸಿದರು. ಉಮಾಬಾಯಿ ಕುಂದಾಪುರರವರು ಅನೇಕ ನಿರಾಶ್ರಿತ ಮಹಿಳೆಯವರಿಗೆ ಆಶ್ರಯದಾತರಾದರು. ಅನಾರೋಗ್ಯದ ಕಾರಣದಿಂದ 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸದಿದ್ದರೂ ಈ ಚಳವಳಿಯಲ್ಲಿ ಭಾಗವಹಿಸಿದ ಭೂಗತ ಕಾರ್ಯಕರ್ತರಿಗೆ ಆಶ್ರಯ ನೀಡುವ ಮೂಲಕ ಚಳವಳಿಯನ್ನು ಬೆಂಬಲಿಸಿದರು. ಗಾಂಧೀಜಿಯವರ ಸಲಹೆಯಂತೆ ಕಸ್ತೂರಿ ಬಾ ನಿಧಿಯ ಜವಾಬ್ದಾರಿಯನ್ನು ವಹಿಸಿಕೊಂಡು ಸಮಾಜ ಸುಧಾರಣೆ ಕೆಲಸವನ್ನು ಮುಂದುವರಿಸಿದರು. ಇಂತಹ ನಿಸ್ವಾರ್ಥ ವ್ಯಕ್ತಿತ್ವವುಳ್ಳ ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮನ್ನು ಇಡಿಯಾಗಿ ಸಮರ್ಪಿಸಿಕೊಂಡ ಉಮಾಬಾಯಿ ಕುಂದಾಪುರರವರು 1992 ರಲ್ಲಿ ಮರಣ ಹೊಂದಿದರು.



## ಅಭ್ಯಾಸಗಳು

**I. ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ಭರ್ತಿಮಾಡಿ.**

1. ರಾಣಿ ಅಬ್ಬಕ್ಕನ ಸ್ಮರಣಾರ್ಥವಾಗಿ ಉಳ್ಳಾಲದಲ್ಲಿ __________ ಆಚರಿಸುತ್ತಾರೆ.
2. ಬಳ್ಳಾರಿ ಸಿದ್ದಮ್ಮ __________ ರಲ್ಲಿ ಜನಿಸಿದರು.
3. 1938ರಲ್ಲಿ ಯಶೋಧರಮ್ಮನವರು __________ ದಲ್ಲಿ ಭಾಗವಹಿಸಿದರು.
4. ಯಶೋಧರಮ್ಮನವರು __________ ಸಚಿವರಾಗಿದ್ದರು.
5. ಸ್ವದೇಶಿ ವ್ರತ ನಾಟಕ ರಚಿಸಿದವರು __________ .

## II. ಕೆಳಗಿನ ಪ್ರಶ್ನೆಗಳಿಗೆ ಗುಂಪುಗಳಲ್ಲಿ ಚರ್ಚಿಸಿ. ಉತ್ತರಿಸಿ.

1. ಉಳ್ಳಾಲದ ರಕ್ಷಣೆಯಲ್ಲಿ ಪೋರ್ಚುಗೀಸರ ವಿರುದ್ಧ ರಾಣಿ ಅಬ್ಬಕ್ಕ ದೇವಿಯ ಹೋರಾಟವನ್ನು ವಿವರಿಸಿ.
2. 'ಬಹುಮುಖ ಪ್ರತಿಭೆಯವರಾಗಿದ್ದ ಕಮಲಾದೇವಿ ಚಟ್ಟೋಪಾಧ್ಯಾಯರವರು ಕರ್ನಾಟಕದ ಹೆಮ್ಮೆ' ಸಮರ್ಥಿಸಿ.
3. ಸ್ವಾತಂತ್ರ್ಯ ಹೋರಾಟಕ್ಕೆ ಉಮಾದೇವಿ ಕುಂದಾಪುರರವರು ನೀಡಿದ ಕೊಡುಗೆಗಳನ್ನು ಪಟ್ಟಿ ಮಾಡಿ.

## III. ಚಟುವಟಿಕೆಗಳು

1. ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ ಮಹಿಳೆಯರ ಜೀವನ ಚರಿತ್ರೆಗಳನ್ನು ಓದಿ.
2. ಸ್ವಾತಂತ್ರ್ಯಾನಂತರ ಕರ್ನಾಟಕದ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರ ಕುರಿತು ಭಾಷಣ ಸ್ಪರ್ಧೆ ಏರ್ಪಡಿಸಿ.





| ಪಾಠ 09 | ಕರ್ನಾಟಕದ ಏಕೀಕರಣ ಮತ್ತು ಗಡಿ ವಿವಾದಗಳು |
|---|---|




**ಪಾಠದ ಪರಿಚಯ**

ಕನ್ನಡ ನಾಡಿಗೆ ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚಿನ ಚರಿತ್ರೆಯಿದೆ. ಕನ್ನಡಿಗರು ಚಾರಿತ್ರಿಕವಾಗಿ ಬೇರೆ ಬೇರೆ ರಾಜಕೀಯ ವ್ಯವಸ್ಥೆಗಳಲ್ಲಿ ಬದುಕಿದವರು. ವಿಜಯನಗರ ಸಾಮ್ರಾಜ್ಯದ ಪತನದ ನಂತರ ಕನ್ನಡ ಭಾಷಿಕ ಪ್ರದೇಶಗಳು ಮರಾಠ ಪೇಶ್ವೆಗಳು, ಪಾಳೆಯಗಾರರು, ಇಂಗ್ಲಿಷರು, ಸುಲ್ತಾನರು, ನವಾಬರು ಮುಂತಾದವರ ಆಳ್ವಿಕೆಯಲ್ಲಿ ಇಪ್ಪತ್ತು ಆಡಳಿತ ಘಟಕಗಳಲ್ಲಿ ಹಂಚಿಹೋಗಿದ್ದವು. ಇದರಿಂದ ಕನ್ನಡಿಗರು ಕನ್ನಡ ನೆಲದಲ್ಲಿಯೇ ಪರಕೀಯತೆಯ ಭಾವನೆಯನ್ನು ಅನುಭವಿಸುತ್ತಿದ್ದರು. ಕರ್ನಾಟಕ ಏಕೀಕರಣ ಚಳವಳಿಯ ವಿವಿಧ ಹಂತಗಳನ್ನು ಪರಿಚಯಿಸಲಾಗಿದೆ. ಪ್ರಸ್ತುತ ಚಾಲ್ತಿಯಲ್ಲಿರುವ ಗಡಿ ವಿವಾದಗಳನ್ನು ಕೂಡ ತಿಳಿಸಲಾಗಿದೆ.

**ಸಾಮರ್ಥ್ಯಗಳು**

1] ಕರ್ನಾಟಕ ಏಕೀಕರಣದ ಹಿನ್ನೆಲೆ ಹಾಗೂ ಚಳವಳಿಯ ಪ್ರಮುಖ ಹಂತಗಳನ್ನು ಅರಿಯುವುದು.

2] ಏಕೀಕರಣ ಚಳವಳಿಯನ್ನು ರೂಪಿಸಿದ ಮಹನೀಯರ ಬಗ್ಗೆ ತಿಳಿಯುವುದು.

3] 1956ರ ನಂತರ ಹುಟ್ಟಿಕೊಂಡ ಗಡಿ ವಿವಾದಗಳನ್ನು ಅರ್ಥೈಸಿಕೊಂಡು ಪರಿಹಾರವನ್ನು ಸೂಚಿಸುವುದು.



## 1. ಕರ್ನಾಟಕ ಏಕೀಕರಣದ ಚಾರಿತ್ರಿಕ ಹಿನ್ನೆಲೆ

'ಕವಿರಾಜಮಾರ್ಗ' ಕೃತಿಯಲ್ಲಿ ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ಇತ್ತು ಎಂದು ವರ್ಣಿಸಲಾಗಿದೆ. ಅನೇಕ ಕನ್ನಡ ಅರಸುಮನೆತನಗಳು ಈ ಭಾಗವನ್ನು ಆಳಿದವು. ಆದರೆ ವಿಜಯನಗರ ಸಾಮ್ರಾಜ್ಯದ ಪತನಾನಂತರ ಕನ್ನಡ ಪ್ರದೇಶಗಳು ರಾಜಕೀಯ ಸ್ಥಿತ್ಯಂತರಗಳಿಗೆ ಒಳಗಾದವು. ರಾಜಕೀಯವಾಗಿ ಮೇಲುಗೈ ಸಾಧಿಸಿದ ಶಕ್ತಿಗಳು ಕನ್ನಡ ಮತ್ತು ಕನ್ನಡಿಗರನ್ನು ಗೌಣವಾಗಿಸಿದವು. ಟಿಪ್ಪುವಿನ ಮರಣದ ನಂತರ ಬ್ರಿಟಿಷರು ಕನ್ನಡ ಭಾಷೆಯನ್ನಾಡುವ ಪ್ರದೇಶಗಳನ್ನು ಬೇರೆ ಬೇರೆ ಭಾಷಿಕ ಹಿನ್ನೆಲೆಯ 20 ಆಡಳಿತಾತ್ಮಕ ಘಟಕಗಳಲ್ಲಿ ಹಂಚಿದರು. ಕನ್ನಡಿಗರು ಮರಾಠ, ನಿಜಾಮ ಮುಂತಾದವರ ಅಧೀನದಲ್ಲಿ ಪರಕೀಯ ಭಾವನೆಯಿಂದ ಬದುಕುವ ಅನಿವಾರ್ಯತೆ ಎದುರಾಯಿತು. ಇಂತಹ ಪ್ರತಿಕೂಲ ಸನ್ನಿವೇಶಗಳಿಂದ ಹೊರಬಂದ ಕನ್ನಡಿಗರು ಒಂದು ರಾಜ್ಯವನ್ನು ಕಟ್ಟಿಕೊಂಡು, ಒಂದೇ ಆಡಳಿತದಲ್ಲಿರಲು ಹೋರಾಟಗಳನ್ನು ನಡೆಸಿದರು. ಇದನ್ನೇ ಏಕೀಕರಣ ಚಳವಳಿಯೆಂದು ಕರೆಯಲಾಗಿದೆ.

ಏಕೀಕರಣದ ಆರಂಭಿಕ ಹೆಜ್ಜೆಯನ್ನು ಇಟ್ಟವರು ಮುಂಬೈ ಕರ್ನಾಟಕ ಭಾಗದ ಜನರು. ರಾ.ಹ. ದೇಶಪಾಂಡೆಯವರ ಅಧ್ಯಕ್ಷತೆಯಲ್ಲಿ 1890ರಲ್ಲಿ ಆರಂಭವಾದ 'ಕರ್ನಾಟಕ ವಿದ್ಯಾವರ್ಧಕ ಸಂಘ' ಏಕೀಕರಣ ಕಲ್ಪನೆಗೆ ಸಾಂಸ್ಥಿಕ ರೂಪವನ್ನು ನೀಡಿತು.

**ಚಟುವಟಿಕೆ :** ಮುಂಬೈ ಕರ್ನಾಟಕ ಪ್ರದೇಶದಲ್ಲಿ ಕನ್ನಡ ಶಾಲೆಗಳನ್ನು ಆರಂಭಿಸಲು ಶ್ರಮಿಸಿದ 'ಕನ್ನಡದ ಹುಲಿ' ಡೆಪ್ಯುಟಿ ಚೆನ್ನಬಸಪ್ಪನವರ ಬಗೆಗೆ ಮಾಹಿತಿಯನ್ನು ಸಂಗ್ರಹಿಸಿರಿ.

ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನಲ್ಲಿ 1915ರಲ್ಲಿ ಸ್ಥಾಪಿತವಾಯಿತು. ಇದು ಕರ್ನಾಟಕದ ಏಕೀಕರಣಕ್ಕೆ ಪ್ರೋತ್ಸಾಹ, ಕನ್ನಡ ಭಾಷೆ ಮತ್ತು ಸಾಹಿತ್ಯದ ಸರ್ವತೋಮುಖ ಬೆಳವಣಿಗೆ ಮುಂತಾದ ಗುರಿಗಳನ್ನು ಹೊಂದಿತ್ತು. ಕರ್ನಾಟಕ ಏಕೀಕರಣ ಸಭಾವನ್ನು ಧಾರವಾಡದಲ್ಲಿ 1916ರಲ್ಲಿ ಪ್ರಾರಂಭಿಸಲಾಯಿತು. ಈ ಸಂಘಟನೆಗಳು ಕರ್ನಾಟಕ ಏಕೀಕರಣ ಚಳವಳಿಯನ್ನು ಮುಂದುವರೆಸಿದವು.

1924 ರಲ್ಲಿ ನಡೆದ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಹುಯಿಲಗೋಳ ನಾರಾಯಣರಾವ್ ಅವರು 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂಬ ಸ್ವಾಗತಗೀತೆಯನ್ನು ಹಾಡುವ ಮೂಲಕ ಏಕೀಕರಣ ಚಳವಳಿಗೆ ವಿದ್ಯುತ್ ಸಂಚಲನವನ್ನು ತಂದುಕೊಟ್ಟರು. ಈ ಸಮ್ಮೇಳನದ ಅಧ್ಯಕ್ಷರಾಗಿದ್ದ ಮಹಾತ್ಮ ಗಾಂಧೀಜಿಯವರು ಏಕೀಕರಣಕ್ಕೆ ತಮ್ಮ ಬೆಂಬಲವನ್ನು ನೀಡಿದರು. ಏಕೀಕರಣ ಚಳವಳಿಯು ಸ್ವಾತಂತ್ರ್ಯ ಚಳವಳಿಗೆ ಪೂರಕವಾಗಿಯೆ ಕೆಲಸ ಮಾಡಿತು.

**ಚಟುವಟಿಕೆ :** ಏಕೀಕರಣಕ್ಕೆ ದುಡಿದ ಸಾಹಿತಿಗಳ ಹೆಸರನ್ನು ಪಟ್ಟಿಮಾಡಿ. ಬಿ.ಎಂ.ಶ್ರೀ ಅವರ ಬಗೆಗೆ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿ.



## 2. ಏಕೀಕರಣ ಚಳವಳಿಯಲ್ಲಿ ಪತ್ರಿಕೋದ್ಯಮ ಮತ್ತು ಸಾಹಿತ್ಯದ ಪಾತ್ರ

ವಿಶ್ವಕರ್ನಾಟಕ, ನವಕರ್ನಾಟಕ, ವಾಗ್ಭೂಷಣ, ಜಯಕರ್ನಾಟಕ, ಸಂಯುಕ್ತ ಕರ್ನಾಟಕ ಮೊದಲಾದ ದಿನಪತ್ರಿಕೆಗಳು, ವಾರಪತ್ರಿಕೆಗಳು ಏಕೀಕರಣ ಚಳವಳಿಗೆ ಪ್ರೇರಣೆ ನೀಡಿದವು. ಈ ಪತ್ರಿಕೆಗಳು ವಿವಿಧ ಭಾಗಗಳಿಂದ ಪ್ರಕಟಗೊಳ್ಳುತ್ತಿದ್ದವು. ಇದರ ಜೊತೆಗೆ ಸಾಹಿತ್ಯ ಕೃತಿಗಳು ಏಕೀಕರಣಕ್ಕೆ ಸ್ಫೂರ್ತಿ ತುಂಬಿದವು.

ಕರ್ನಾಟಕದ ನಾಡುನುಡಿ ಸಂಸ್ಕೃತಿಗಳ ಸಂವರ್ಧನೆಗಾಗಿ ಶ್ರಮಿಸಿದ ಹಿರಿಯರೆಂದರೆ ಆಲೂರು ವೆಂಕಟರಾಯರು. ಕರ್ನಾಟಕದ ಅಂದಿನ ದುಃಸ್ಥಿತಿಯನ್ನು ಕಂಡು ಅವರು ಹೀಗೆಂದು ಉದ್ಗರಿಸಿದ್ದರು: "ಛೇ, ಕರ್ನಾಟಕವೆಲ್ಲಿದೆ?... ನಾಲ್ಕಾರು ಕಡೆ ಹರಿದು ಹಂಚಿಹೋದ ಕರ್ನಾಟಕವನ್ನು ಹೊಲಿದು ಅಖಂಡವಾಗಿ ಮಾಡುವವರಾರು? ಅಷ್ಟೊಂದು ಅಭಿಮಾನ ಉಂಟೇನು?"

ಕನ್ನಡನಾಡು ನುಡಿಗಳ ವೈಭವವನ್ನು ಕನ್ನಡಿಗರಿಗೆ ತಿಳಿಸುವುದೇ ಆಲೂರು ವೆಂಕಟರಾಯರ ಉದ್ದೇಶವಾಗಿತ್ತು. ಅದಕ್ಕಾಗಿ 'ಕರ್ನಾಟಕದ ಗತವೈಭವ' ಎಂಬ ಗ್ರಂಥ ಬರೆದು ತಮ್ಮ ಖರ್ಚಿನಿಂದ ಪ್ರಕಟಿಸಿದರು. ಇದು ಅತ್ಯಂತ ಸ್ಫೂರ್ತಿದಾಯಕ ಪುಸ್ತಕವಾಗಿತ್ತು. ಹೈದರಾಬಾದಿನ ಕನ್ನಡಿಗರು ಅವರಿಗೆ ಸನ್ಮಾನ ಮಾಡಿ (1941) 'ಕರ್ನಾಟಕ ಕುಲಪುರೋಹಿತ' ಎಂಬ ಬಿರುದನ್ನು ಅರ್ಪಿಸಿದರು. ಮುಂಬೈಕರ್ನಾಟಕದಲ್ಲಿ ಜಾಗೃತಿ ಮೂಡಿಬರಲು ಶಾಂತಕವಿಗಳ ಪಾತ್ರವೂ ಮಹತ್ವದ್ದಾಗಿದೆ. ಸಾಹಿತ್ಯ ಸಮ್ಮೇಳನದ ಖರ್ಚಿಗಾಗಿ "ಬೇಡಲು ಕನ್ನಡದಾಸಯ್ಯ ಬಂದಿಹ, ನೀಡಿರಮ್ಮಾ ತಡಮಾಡದೇ' ಎಂದು

ದಾಸಯ್ಯನಾಗಿ ಹಾಡಿ ಹಣ ಸಂಗ್ರಹಿಸಿದರು. ಕುವೆಂಪು ಅವರ "ಜಯ ಹೇ ಕರ್ನಾಟಕ ಮಾತೆ', 'ನೀ ಮೆಟ್ಟುವ ನೆಲ ಅದೇ ಕರ್ನಾಟಕ' ಮುಂತಾದವು ಲಕ್ಷೋಪಲಕ್ಷ ಕನ್ನಡಿಗರ ಹೃದಯಗಳನ್ನು ತಟ್ಟಿದವು. ಹುಯಿಲಗೋಳ ನಾರಾಯಣರಾವ್ ಅವರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡಗೀತೆಯು ಅತ್ಯಂತ ಜನಪ್ರಿಯವಾಯಿತು. ಕಯ್ಯಾರಕಿಞ್ಞಣ್ಣ ರೈ ಅವರು ಕರ್ನಾಟಕದಲ್ಲಿ ಕಾಸರಗೋಡು ವಿಲೀನಗೊಳ್ಳಬೇಕೆಂದು ಕೊನೆಯವರೆಗೂ ಹೋರಾಡಿದರು. ಇನ್ನೂ ಅನೇಕ ಕವಿಗಳು, ಲೇಖಕರು, ಪತ್ರಕರ್ತರು ಕನ್ನಡಿಗರಲ್ಲಿ ಏಕೀಕರಣದ ಬಗ್ಗೆ ತೀವ್ರ ಅಭಿಮಾನವನ್ನು ಮೂಡಿಸಿದರು.


ಆಲೂರು ವೆಂಕಟರಾಯರು


ಹುಯಿಲಗೋಳ ನಾರಾಯಣರಾವ್


ಕುವೆಂಪು



### 3. ಸ್ವಾತಂತ್ರ್ಯೋತ್ತರ ಏಕೀಕರಣ ಚಳವಳಿ

ಅರ್ಧ ಶತಮಾನಕ್ಕಿಂತಲೂ ಹೆಚ್ಚು ಕಾಲಾವಧಿಯ ಏಕೀಕರಣದ ಕನಸು ನನಸಾದುದು ದೇಶ ಸ್ವಾತಂತ್ರ್ಯಗಳಿಸಿದ ಅನಂತರವೇ; ಅದೂ ಮೂರು ಹಂತಗಳಲ್ಲಿ.

### 1. ಮೊದಲನೆಯ ಹಂತ (ಸಾ.ಶ. 1947-48)

1947 ರ ಮೊದಲು ನಮ್ಮ ದೇಶದಲ್ಲಿ ಎರಡು ಬಗೆಯ ರಾಜ್ಯಗಳಿದ್ದವು: ಬ್ರಿಟಿಷ್ ಭಾರತದ ಪ್ರಾಂತ್ಯಗಳು ಮತ್ತು ಅರಸೊತ್ತಿಗೆಯ (ಸಂಸ್ಥಾನಿಕ) 562 ರಾಜ್ಯಗಳು. ಸಂವಿಧಾನ ಸಭೆಯು ಭಾರತವನ್ನು ಭಾಷಾವಾರು ಪ್ರಾಂತ್ಯಗಳಾಗಿ ರೂಪಿಸದೆ, ಭಾರತವನ್ನು ನಾಲ್ಕು ಬಗೆಯ ಆಡಳಿತ ಘಟಕಗಳನ್ನಾಗಿ ವಿಂಗಡಿಸಿತು. ಅವೇ ಎ,ಬಿ,ಸಿ ಮತ್ತು ಡಿ ಘಟಕಗಳು. ಅದರಂತೆ ಕರ್ನಾಟಕದ ಇಪ್ಪತ್ತು ಆಡಳಿತ ಘಟಕಗಳನ್ನು ಐದು ಘಟಕಗಳನ್ನಾಗಿ ಪುನರ್ ವಿಂಗಡಿಸಲಾಯಿತು. ಈ ಐದು ಘಟಕಗಳೆಂದರೆ ಮುಂಬೈ, ಮದ್ರಾಸ್, ಮೈಸೂರು, ಹೈದರಾಬಾದ್ ಮತ್ತು ಕೊಡಗು. ಇದು ಕರ್ನಾಟಕ ಏಕೀಕರಣದ ನಿಟ್ಟಿನಲ್ಲಿ ಮೊದಲನೆಯ ಹಂತವಾಯಿತು.

## 2. ಎರಡನೆಯ ಹಂತ (ಸಾ.ಶ. 1953)

1951–52 ರಲ್ಲಿ ಲೋಕಸಭೆಗೆ ಪ್ರಥಮ ಸಾರ್ವತ್ರಿಕ ಚುನಾವಣೆ ನಡೆಯಿತು. ಚುನಾವಣೆಯ ನಂತರ ಉಗ್ರ ಚಳವಳಿಯ ಮನೋಭಾವದ 'ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್' ಎಂಬ ಪಕ್ಷ ಉದಯಿಸಿತು (1952). ಈ ಪಕ್ಷ ಏಕೀಕರಣಕ್ಕಾಗಿ ಸತ್ಯಾಗ್ರಹ ನಡೆಸಿ ಸುಮಾರು ಐದು ಸಾವಿರ ಮಂದಿ ಬಂಧಿತರಾಗಿ ಸೆರೆಮನೆ ಸೇರಿದರು. ಕೆಂಗಲ್ ಹನುಮಂತಯ್ಯ, ಎಸ್.ನಿಜಲಿಂಗಪ್ಪ ಇವರುಗಳು ಏಕೀಕರಣಕ್ಕೆ ಬೆಂಬಲವನ್ನು ನೀಡಿದರು ಮತ್ತು ಏಕೀಕರಣದ ಪರವಾಗಿ ರಾಜ್ಯದಾದ್ಯಂತ ಪ್ರವಾಸ ಕೈಗೊಂಡರು. ಪ್ರಚಾರ ಭಾಷಣಗಳನ್ನು ಮಾಡಿದರು.

1952 ರಲ್ಲಿ ಪೊಟ್ಟಿ ಶ್ರೀರಾಮುಲು ಎಂಬ ಆಂಧ್ರದ ಮುಖಂಡರು ಆಂಧ್ರ ಪ್ರಾಂತ್ಯವನ್ನು ರಚಿಸಲು ಒತ್ತಾಯಿಸಿ ಉಪವಾಸ ಕೈಗೊಂಡು 58 ದಿನಗಳ ನಂತರ ನಿಧನ ಹೊಂದಿದರು. ಆಂಧ್ರದಲ್ಲಿ ತೀವ್ರವಾದ ಗಲಭೆಗಳುಂಟಾದವು. ಈ ಘಟನೆಯ ಬಳಿಕ ಪ್ರಧಾನಿ ಜವಾಹರಲಾಲ್ ನೆಹರು ಆಂಧ್ರ ರಾಜ್ಯವನ್ನು ರಚಿಸಲು ಸರ್ಕಾರ ನಿರ್ಧರಿಸಿದೆಯೆಂದು ಘೋಷಿಸಿದರು. ಅದರಂತೆ ಆಂಧ್ರ ಪ್ರದೇಶ ರಚನೆಯಾಯಿತು.

ಆಂಧ್ರಪ್ರದೇಶ ರಚನೆಯಾದಾಗ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳನ್ನು ಮೈಸೂರು ಪ್ರಾಂತಕ್ಕೆ ಸೇರಿಸಲಾಯಿತು. ಇದು ಏಕೀಕರಣದ ಎರಡನೆಯ ಹಂತ.

## 3. ಕೊನೆಯ ಹಂತ

ಆಂಧ್ರಪ್ರದೇಶ ರಚನೆಯಾದ ನಂತರ ಭಾಷೆಯ ಆಧಾರದಲ್ಲಿ ಪ್ರಾಂತ್ಯ ಪುನರ್‌ವಿಂಗಡಣೆಯ ಬೇಡಿಕೆ ತೀವ್ರಗೊಂಡಿತು. ಕೇಂದ್ರ ಸರ್ಕಾರವು ರಾಜ್ಯಗಳ ಪುನರ್ ವಿಂಗಡಣೆಯನ್ನು ಕುರಿತು ವರದಿ ನೀಡಲು 'ರಾಜ್ಯ ಪುನರ್‌ವಿಂಗಡಣಾ ಆಯೋಗ'ವನ್ನು (ಎಸ್.ಆರ್.ಸಿ) ನೇಮಿಸಿತು. ಅದರ ಅಧ್ಯಕ್ಷರು ಎಸ್. ಫಜಲ್‌ಅಲಿ (ಆದ್ದರಿಂದ 'ಫಜಲ್‌ಅಲಿ ಆಯೋಗ' ಎನ್ನುವರು). ಅದರ ಇತರ ಸದಸ್ಯರು ಎಚ್.ಎನ್. ಕುಂಜ್ರು ಮತ್ತು ಕೆ.ಎಂ. ಪಣಿಕ್ಕರ್. ಆಯೋಗವು 1955 ರಲ್ಲಿ ವರದಿಯನ್ನು ಸಲ್ಲಿಸಿತು. ಅದರಂತೆ ಭಾರತದ ರಾಜ್ಯಗಳ ಪುನರ್‌ವಿಂಗಡಣೆಯು ಭಾಷೆ ಮತ್ತು ಆಡಳಿತದ ಅನುಕೂಲದ ನೆಲೆಗಳಲ್ಲಿ ನಡೆಯಿತು. ನಾಡಿನ ಎಲ್ಲ ಪಕ್ಷಗಳು ಆಯೋಗದ ವರದಿಯನ್ನು ಮಾನ್ಯ ಮಾಡಿದವು. ಆದರೆ ಕಾಸರಗೋಡನ್ನು ಕೇರಳ ರಾಜ್ಯಕ್ಕೆ ಸೇರಿಸಿದ್ದನ್ನೂ ಬಳ್ಳಾರಿ ಜಿಲ್ಲೆಯ ಕೆಲವು ತಾಲ್ಲೂಕುಗಳನ್ನು ಆಂಧ್ರಪ್ರದೇಶಕ್ಕೆ ಸೇರಿಸುವ ಕುರಿತು ಮಾಡಿದ ಸಲಹೆಗಳನ್ನೂ ಕನ್ನಡಿಗರು ಏಕಕಂಠದಿಂದ ಪ್ರತಿಭಟಿಸಿದರು.

ಕೇಂದ್ರ ಸರ್ಕಾರವು ರಾಜ್ಯ ಪುನರ್ ವಿಂಗಡಣಾ ಆಯೋಗದ ವರದಿಯನ್ನು ಒಪ್ಪಿದ್ದರಿಂದ 1956 ನವೆಂಬರ್ 1 ರಂದು 'ವಿಶಾಲ ಮೈಸೂರು ರಾಜ್ಯ' ಅಸ್ತಿತ್ವಕ್ಕೆ ಬಂತು. ಏಕೀಕೃತಗೊಂಡ ಮೈಸೂರು ರಾಜ್ಯವು ಈ ಕೆಳಕಂಡ ಜಿಲ್ಲೆಗಳನ್ನು ಒಳಗೊಂಡಿತ್ತು.

